ಶ್ರೀಃ

# ಕರ್ಣಾಟಕ
# ಧರ್ಮಸಿಂಧುಸಾರ

## ಮೊದಲನೆಯ ಪರಿಚ್ಛೇದ.



ಈ ಗ್ರಂಥವು

ಪಂಡಿತೋತ್ತಮ ಕಾಶೀನಾಥೋಪಾಧ್ಯಾಯರಿಂದ ರಚಿತವಾದ
ಸಂಸ್ಕೃತಗ್ರಂಥದ ಕನ್ನಡ ಭಾಷಾಂತರವು.



ಪರಿವರ್ತಕ ಮತ್ತು ಪ್ರಕಾಶಕ:—
ಟಿ. ಚಿದಂಬರಪಂಡಿತ,
ಬೀರೂರು. (ಡಿಸ್ಟ್ರಿಕ್ಟ ಕಡೂರ.)





1924.



ಶಾಲಿವಾಹನಶಕೆ ವರ್ಷ ೧೮೪೬.

ಬೆಲೆ ೧ ರೂ.

# ಉಪೋದ್ಘಾತ.



ಈ ಪ್ರಪಂಚದಲ್ಲಿ ಸಕಲಪ್ರಾಣಿಗಳೂ ಸುಖವನ್ನು ಹೊಂದಬೇಕೆಂದೇ ಸರ್ವವಿಧದಿಂದಲೂ ಪ್ರಯತ್ನಿಸುತ್ತಿರುವದು ಸಕಲರಿಗೂ ತಿಳಿದೇ ಇದೆ. 'ದುಃಖವಿಲ್ಲದೇ ಇರುವದೇ ಸುಖವೆಂದು ಹೇಳಬಹುದು' ಇಂತಹ ಸುಖವು ಪರಮಾತ್ಮನಲ್ಲಲ್ಲದೆ ಮತ್ತೆಲ್ಲಿಯೂ ಇರದು. ಆದುದರಿಂದ ಪ್ರತಿಯೊಂದು ಪ್ರಾಣಿಯೂ ಪರಮಾತ್ಮನ ಸಾಲೋಕ್ಯಾದಿ ಮೋಕ್ಷಚತುಷ್ಟಯಗಳಲ್ಲೊಂದನ್ನು ಹೊಂದಿದ ಹೊರತು ಅಂತಹ ನಿತ್ಯಾನಂದಸುಖಕ್ಕೆ ಪಾತ್ರನಾಗಲಾರನು.

'ಜ್ಞಾನಾ ದೇವಹಿ ಕೈವಲ್ಯಂ' ಎಂತ ಇರುವದರಿಂದ ಜ್ಞಾನವನ್ನು ಪಡೆದಲ್ಲದೆ ಈ ಮುಕ್ತಿಯು ದೊರೆಯಲಾರದು; ಆದರೆ ಜ್ಞಾನವು ವಾಚನಿಕವಲ್ಲ. ಶೀತೋಷ್ಣಗಳೂ, ಸುಖದುಃಖಗಳೂ, ಮೇಧ್ಯಾಮೇಧ್ಯಗಳೂ ಒಂದೇ ಎಂದು ಬಾಯಿಂದ ಹೇಳುವದು ಬಹು ಸುಲಭ. ನಿಸ್ಸಂದಿಗ್ಧವಾದ ಅಂಥ ತಿಳುವಳಿಕೆಯಿರುವುದೂ ಅದಕ್ಕನುಸಾರವಾದ ಆಚರಣೆಯಿರುವುದೂ ಬಹು ಕಷ್ಟಕರವು. ಇಂದ್ರಿಯಗಳನ್ನು ಗೆದ್ದು ಕಾಮಕ್ರೋಧಾದಿಗಳಿಗೆ ವಶನಾಗದೆ ಶಮದಮಾದಿ ಸಂಪನ್ನನಾದ ಯೋಗಿಯಲ್ಲಲ್ಲದೆ ಈ ಜ್ಞಾನವು ಸ್ಥಿರವಾಗಿ ನಿಲ್ಲಲಾರದು. ಇಂಥಾ ಜ್ಞಾನವನ್ನು ಸಂಪಾದಿಸಲು ಪ್ರಾಯಶಃ ಮನುಷ್ಯನಿಗೆ ಒಂದೇ ಜನ್ಮವು ಸಾಲದು. ಅಂದರೆ ಬಹು ಜನ್ಮಗಳ ಅಭ್ಯಾಸಯೋಗಹೊರತು ಜ್ಞಾನವು ದೃಢವಾಗಲಾರದು. ಅತಏವ ಭಗವದ್ಗೀತಾದಲ್ಲಿ ಭಗವಂಗನು''ಬಹೂನಾಂ ಜನ್ಮನಾಮಂತೆ ಜ್ಞಾನವಾನ್' ಮಾಂ ಪ್ರಪದ್ಯತೆ' ಬಹು ಜನ್ಮಗಳ ಕೊನೆಯಲ್ಲಿ ಜ್ಞಾನಿಯಾಗಿ ನನ್ನನ್ನು ಹೊಂದುತ್ತಾನೆ, ಎಂತ ಉಪದೇಶಿಸಿರುತ್ತಾನೆ ಆದರೆ ಈ ಲೋಕದಲ್ಲಿ ಪ್ರಾಣಿಗಳು ತಮ್ಮ ತಮ್ಮ ಪ್ರಾರಬ್ಧ ಕರ್ಮಾನುಸಾರವಾಗಿ ಜನ್ಮಗಳನ್ನು ಪಡೆಯುತ್ತಿರುವವು. ಪ್ರಾರಬ್ಧ ಕರ್ಮವೆಂದರೆ, ಜನ್ಮಾಂತರದಲ್ಲಿ ಮಾಡಿದ ಕರ್ಮವು ಈ ಪ್ರಾರಬ್ಧವು ಪುಣ್ಯರೂಪವಾಗಿದ್ದರೆ, ಮುಂದಿನ ಜನ್ಮದಲ್ಲಿ ಪುಣ್ಯಫಲವನ್ನನುಭವಿಸುವುದಲ್ಲದೆ, ಆ ಜನ್ಮದಲ್ಲೂ ಉತ್ತಮ ಕರ್ಮಗಳನ್ನು ಮಾಡುವನು.

ಪಾಪರೂಪವಾಗಿದ್ದರೆ, ಅದಕ್ಕೆ ತಕ್ಕಂತೆ ದುಷ್ಕರ್ಮಿಯಾಗಿ, ನರಕಭಾಜನನಾಗುತ್ತಾನೆ. ಪಾಠಶಾಲೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ಬಾಲಕನು ಒಂದು ತರಗತಿಯಲ್ಲಿ ಪಾಠಗಳನ್ನು ಚನ್ನಾಗಿ ಕಲಿತುಕೊಂಡರೆ, ಹೇಗೆ ಮೇಲಿನ ತರಗತಿಗೆ ಸೇರುವನೋ ಮತ್ತು ಅವನು ಆ ತರಗತಿಯಲ್ಲಿ ಕಲಿತ ಪಾಠಗಳೆಲ್ಲವೂ ಹೇಗೆ ಮುಂದಿನ ಪಾಠಗಳನ್ನು ಕಲಿಯುವುದಕ್ಕೆ ಸಾಮರ್ಥ್ಯವನ್ನು ಕೊಡುತ್ತಿರುವುವೋ ಹಾಗೆ ಉತ್ತಮ ಕರ್ಮಗಳು ಮನುಷ್ಯನನ್ನು ಮೇಲು ಮೇಲಿನ ಅಂತಸ್ತಿಗೆ ತೆಗೆದುಕೊಂಡು ಹೋಗುತ್ತಿರುವುವೆಂಬುವದರಲ್ಲಿ ಸಂದೇಹವೇ ಇಲ್ಲ ಆದರೆ ವಿದ್ಯಾರ್ಜನೆಗೆ ಹೊರಟ ಬಾಲಕನಿಗೆ, ಹೇಗೆ ಯೋಗ್ಯನಾದ ಉಪಾಧ್ಯಾಯನ ಸದುಪದೇಶವು ಅವಶ್ಯಕವೋ ಹಾಗೆಯೇ ಜ್ಞಾನಾರ್ಜನೆಗೆ ಹೊರಟ ಮನುಷ್ಯನಿಗೂ ಸನ್ಮಾರ್ಗೋಪದೇಶಕರು ಬೇಕೇಬೇಕು. ಪರಮ ಕರುಣಾಶಾಲಿಯಾದ ಭಗವಂತನ ಮುಖೋದ್ಗತಗಳಾದ ವೇದಗಳು ಪ್ರಾಣಿಗಳ ಐಹಿಕ ಮತ್ತು ಪಾರಲೌಕಿಕ ಸುಖಸಾಧನೆಗೆ ಅತ್ಯಂತ ಸುಲಭವಾದ ಮಾರ್ಗವನ್ನುಪದೇಶಿಸುತ್ತಿರುವುವು. ಕಾಲಕ್ರಮದಿಂದ ಮನುಷ್ಯರ ಬುದ್ಧಿಯು ಮಂದವಾಗುತ್ತ ಬಂದುದರಿಂದ ವೇದಾರ್ಥವು ದುರವಗಾಹವಾದದ್ದನ್ನು ತಿಳಿದು ಭಗವದಂಶ ಸಂಭೂತರಾದ, ಮನು, ಪರಾಶರ, ಯಾಜ್ಞವಲ್ಕ್ಯ, ವೇದವ್ಯಾಸರೇ ಮೊದಲಾದ ಮಹರ್ಷಿಗಳು ವೇದೋಕ್ತವಾದ ಧರ್ಮವನ್ನೇ ಸ್ಮೃತಿ ಶಾಸ್ತ್ರಗಳ ರೂಪವಾಗಿ ಸುಲಭದಿಂದ ವಿಶದಪಡಿಸಿದರು. ಅಲ್ಲದೆ ಗೀತಾಶಾಸ್ತ್ರದಲ್ಲಿ ಪರಮಾತ್ಮನು 'ಯಶ್ಶಾಸ್ತ್ರ ವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ || ನಸಸಿದ್ಧಿಮವಾಪ್ನೋತಿ ನಸುಖಂ ನ ಪರಾಂಗತಿಂ || ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯ ವ್ಯವಸ್ಥಿತೌ || ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮಕರ್ತುಮಿಹಾರ್ಹಸಿ'' || ''ಯಾವ ಮನುಷ್ಯನು ಶಾಸ್ತ್ರವಿಧಿಯನ್ನು ಬಿಟ್ಟು ತನ್ನ ಇಚ್ಛಾನುಸಾರವಾಗಿ ವರ್ತಿಸುತ್ತಿರುವನೋ ಅವನು ಸಿದ್ಧಿಯನ್ನಾಗಲೀ, ಉತ್ತಮವಾದ ಗತಿಯನ್ನಾಗಲೀ ಸುಖವನ್ನಾಗಲೀ ಹೊಂದಲಾರನು. ಆದುದರಿಂದ, ಎಲೈ ಅರ್ಜುನನೆ! ಈ ಕಾರ್ಯವು ಮಾಡತಕ್ಕದ್ದು; ಈ ಕಾರ್ಯವು ಮಾಡತಕ್ಕದ್ದಲ್ಲವೆಂಬುವುದನ್ನು ತಿಳಿಯಲು ಈ ಲೋಕದಲ್ಲಿ ಶಾಸ್ತ್ರವೇ ಪ್ರಮಾಣವು. ಶಾಸ್ತ್ರವಿಧಿಯಲ್ಲಿ

ಹೇಳಿರುವುದನ್ನು ತಿಳಿದು, ಕರ್ಮಗಳನ್ನು ಮಾಡಲು ಅರ್ಹನಾಗುತ್ತೀ ಎಂದು ಅರ್ಜುನನಿಗೆ ಉಪದೇಶಿಸಿರುವುದರಿಂದ ಶ್ರುತಿ-ಸ್ಮೃತಿಗಳಲ್ಲಿ ಹೇಳಿರುವ ವರ್ಣ, ಮತ್ತು ಆಶ್ರಮೋಚಿತಗಳಾದ ಕರ್ಮಗಳನ್ನು ಮಾಡಿ ಇಂದ್ರಿಯಗಳನ್ನು ಗೆದ್ದು ಚಿತ್ತಶುದ್ಧಿಯನ್ನು ಹೊಂದದಹೊರತು ಮನುಷ್ಯನು, ಐಹಿಕಾಮುಷ್ಮಿಕ ಸುಖಸಾಧನವಾದ ಜ್ಞಾನವನ್ನು ಹೊಂದಲಾರನೆಂದು ದೃಢವಾಗಿ ಹೇಳಬಹುದು. ಆದರೆ ಅನೇಕ ಮಹರ್ಷಿಗಳು, ಸರ್ವತೋಮುಖವಾಗಿ ಹೇಳಿರುವ, ಈ ಸ್ಮೃತಿಶಾಸ್ತ್ರಗಳು ಅನೇಕವಾಗಿರುವುವು. ಹೀಗಿರುವ ಈ ಶಾಸ್ತ್ರಗಳನ್ನೋದಿ ಅವುಗಳ ತತ್ವವನ್ನು ತಿಳಿಯುವುದು, ಅತಿ ಸೂಕ್ಷ್ಮವಾದ ಬುದ್ಧಿಯುಳ್ಳ ಮಹನೀಯರಿಗೆ ಹೊರತು, ಸಾಮಾನ್ಯವಾದ ಬುದ್ಧಿಯುಳ್ಳ ಜನರಿಗೆ ತಿಳಿಯುವುದು ಕಷ್ಟವಾಗಿದ್ದುದರಿಂದ, ಹೇಮಾದ್ರಿ, ವೈದ್ಯನಾಥ, ಮಾಧವಾಚಾರ್ಯ, ಇವರೇ ಮೊದಲಾದ ಮಹನೀಯರು ಮಹರ್ಷಿಗಳ ಶಾಸ್ತ್ರತತ್ವವನ್ನು ಪೂರ್ವಪಕ್ಷ ಸಿದ್ಧಾಂತಗಳಿಂದ ದೃಢೀಕರಿಸಿ ತಿಳಿಸಿದರು. ಲೋಕಮಾನ್ಯಗಳಾದ ಈ ಸ್ಮೃತ್ಯುಕ್ತ ಧರ್ಮಗಳು ಸರ್ವಾದೃತಗಳಾಗಿ ಭಾರತಭೂಮಿಯಲ್ಲೆಲ್ಲಾ ಪ್ರಚಾರದಲ್ಲಿರುವದು ಯಾರಿಗೂ ತಿಳಿಯದ ವಿಚಾರವಲ್ಲ; ಆದರೆ ಕಲಿಕಾಲವು ಹೆಚ್ಚುತ್ತ ಬಂದ ಹಾಗೆಲ್ಲ ಮನುಷ್ಯರಿಗೆ ಪ್ರಾಯಿಕವಾಗಿ ಪ್ರಮಾದಾಲಸ್ಯಗಳೂಹೆಚ್ಚುತ್ತ ಬಂದುದರಿಂದ ಬುದ್ಧಿಗೆ ಜಡತ್ವವೂ, ಮಾಲಿನ್ಯವೂ ಉಂಟಾಗುತ್ತಕ್ರಮವಾಗಿ ಸ್ಮೃತಿಗಳ ಅರ್ಥವನ್ನು ತಿಳಿಯುವದೂ ಕಷ್ಟವಾಗಲಾರಂಭಿಸಿತು. ಇದನ್ನು ತಿಳಿದು ಶಾಲಿವಾಹನ ಶಕ ೧೭೦೦ ನೇ ವರ್ಷದಲ್ಲಿ ಪಂಢರೀ ಕ್ಷೇತ್ರದಲ್ಲಿದ್ದ ಪರಮಸಾಧುಗಳೂ, ಚತುಃಶಾಸ್ತ್ರಪಂಡಿತರೂ, ವಿಟ್ಠಲನ ಪರಮಭಕ್ತರೂ ಆದ ಕಾಶೀನಾಥೋಪಾಧ್ಯಾಯರೆಂಬ ಮಹನೀಯರು ಈ ಕೊರತೆಯನ್ನು ಹೋಗಲಾಡಿಸಿ ವರ್ಣಾಶ್ರಮ ಧರ್ಮಗಳು ನಿರಾಂತಕವಾಗಿ ನಡಿಯುವದಕ್ಕೆ ಸೌಲಭ್ಯವನ್ನುಂಟು ಮಾಡಬೇಕೆಂದು ಸಂಸ್ಕೃತ ಭಾಷೆಯಲ್ಲಿ ಸಾಮಾನ್ಯ ಪರಿಚಯ ಉಳ್ಳವರಿಗೂ ಸಹಾ ಸುಲಭವಾಗಿ ತಿಳಿಯುವಂತೆ ಪೂರ್ವಪಕ್ಷಗಳನ್ನು ಬಿಟ್ಟು ಕೇವಲ ಸಿದ್ಧಾಂತವನ್ನೇ ಲಲಿತವಾದ ವಾಕ್ಯಗಳಿಂದ ಬರೆದು ಧರ್ಮಸಿಂಧುಸಾರವೆಂಬ ಹೆಸರನ್ನಿಟ್ಟು ಲೋಕದಲ್ಲಿ ಪ್ರಚಾರಪಡಿಸಿದರು. ವರ್ಣಾಶ್ರಮ ಧರ್ಮಗಳಿಗೆ ಸಂಬಂಧ

ಪಟ್ಟ ಸಕಲ ಕರ್ಮಗಳನ್ನೂ ನಿಸ್ಸಂದಿಗ್ಧವಾಗಿ ಬೋಧಿಸುವ ಈ ಧರ್ಮ ಶಾಸ್ತ್ರವು ಸಕಲ ಶಿಷ್ಟರಿಂದಲೂ ಪರಿಗ್ರಹೀತವಾಗಿ ಪ್ರಚಾರದಲ್ಲಿದೆ. ಈಚೆಗೆ ಸಂಸ್ಕೃತ ಭಾಷಾಭ್ಯಾಸವೇ ವಿರಳವಾಗುತ್ತ ಬಂದುದರಿಂದ ಧರ್ಮಸಿಂಧು ವಿನ ಅರ್ಥವನ್ನು ತಿಳಿಯುವದೂ ಸಹಾ ಬಹು ಕಷ್ಟವಾಗಿ ಪರಿಣಮಿಸಿರುತ್ತೆ. ಪ್ರಕೃತಕಾಲದಲ್ಲಂತೂ ಒಂದೊಂದು ಊರಲ್ಲಿ ಸಂಸ್ಕೃತವನ್ನು ಅಭ್ಯಾಸ ಮಾಡಿದವರು ಇಲ್ಲವೇ ಇಲ್ಲ. ಇದರಿಂದ ಧರ್ಮವಾಸನೆಯುಳ್ಳ ಆಸ್ತಿಕರಿಗೆ ಕರ್ತವ್ಯಕರ್ಮಗಳ ಜ್ಞಾನವೇ ಶೂನ್ಯವಾಗುತ್ತ ಬಂದಿರುವದು. ಕಲಿ ಮಾಹಾತ್ಮ್ಯಯಿಂದಾಗಿರುವ ಈ ಕುಂದುಕೊರತೆಗಳನ್ನು ನಿವರ್ತನ ಮಾಡು ವದು ಅಸಾಧ್ಯವೆಂದು ತಿಳಿದು ಪುರುಷಪ್ರಯತ್ನದಲ್ಲಿ ಸರ್ವಾತ್ಮನಾ ಪರಾ ಙ್ಮುಖರಾಗಬಾರದೆಂದು ತಿಳಿದಿರುವ ಆಸ್ತಿಕರಾದ ಸನ್ಮಿತ್ರರ ಪ್ರೇರಣೆಯಿಂದ ಪಂಡಿತೋತ್ತಮರಾದ ಕಾಶೀನಾಥೋಪಾಧ್ಯಾಯರಿಂದ ರಚಿತವಾಗಿರುವ ಧರ್ಮಸಿಂಧುಸಾರವೆಂಬ ಗ್ರಂಥವನ್ನು, ಸಂಸ್ಕೃತದಲ್ಲಿ ಪರಿಚಯವಿಲ್ಲದ ಕನ್ನಡಿಗರ ಉಪಯೋಗಕ್ಕಾಗಿ ಆಮೂಲಾಗ್ರವಾಗಿ ಕನ್ನಡಿಸಿ, ವರ್ಣಾ ಶ್ರಮ ಧರ್ಮಾಭಿಮಾನಿಗಳೂ ಆಸ್ತಿಕರೂ ಆದ ನಮ್ಮ ಕರ್ನಾಟಕ ಮಹಾ ಶಯರ ಮುಂದಿರಿಸಿರುವೆನು. ಆಸ್ತಿಕಮಹಾಶಯರಿಗೆ ಧರ್ಮಜ್ಞಾನವಿಷ ಯದಲ್ಲಿ ಈ ಗ್ರಂಥವು ಸಹಾಯವಾಗುವದಾದರೆ ಅದಕ್ಕಿಂತ ಹೆಚ್ಚಿನ ಕೃತ ಕೃತ್ಯತೆಯನ್ನು ನಾನು ಬಯಸುವದಿಲ್ಲ. ನನ್ನೀ ಪರಿವರ್ತನದಲ್ಲಿ ಗುಣ ದೋಷಗಳನ್ನು ಪರಿಶೀಲಿಸುವದರಲ್ಲಿ ತಮ್ಮ ಅಮೋಘವಾದ ಕಾಲವನ್ನು ವ್ಯಯಮಾಡಿ ಸಹಾಯ ಮಾಡಿರುವ, ವೇ. ಬ್ರಂ. ಪಂಡಿತ ಎಚ್. ಲಕ್ಷ್ಮೀ ನೃಸಿಂಹ ಶಾಸ್ತ್ರಿಗಳವರಿಗೆ ಕೃತಜ್ಞನಾಗಿದ್ದೇನೆ. ಅಲ್ಪಜ್ಞನಾದ ನನ್ನೀ ಪರಿ ವರ್ತನದಲ್ಲಿ ತಪ್ಪುಗಳಿದ್ದರೆ 'ನಡೆಯುವವನು ಎಡವುವನು' ಎಂದು ಭಾವಿಸಿ, ವಿದ್ವಾಂಸರು ಕ್ಷಮಿಸಬೇಕಲ್ಲದೆ ದಯವಿಟ್ಟು ತಿಳಿಸಿದಲ್ಲಿ, ಕೃತಜ್ಞತಾ ಪೂರ್ವಕವಾಗಿ ಸ್ವೀಕರಿಸಿ, ಮುಂದಿನ ಮುದ್ರಣದಲ್ಲಿ ಸರಿಪಡಿಸುವೆನು. ಇತಿ

ಸಜ್ಜನ ವಿಧೇಯ,

**ಟಿ. ಚಿದಂಬರ ಪಂಡಿತ,**

ಪರಿವರ್ತಕ ಮತ್ತು ಪ್ರಕಾಶಕ, ಬೀರೂರು.

ಶ್ರೀ

# ಧರ್ಮಸಿಂಧುಸಾರದ ಮೊದಲನೆಯ ಪರಿಚ್ಛೇದದ ವಿಷಯಾನುಕ್ರಮಣಿಕೆ.

||ಶ್ರೀ ಗಣೇಶ್ವರಾಯನಮಃ||

||ಶ್ರೀ ಲಕ್ಷ್ಮೀನೃಸಿಂಹಾಯನಮಃ ಶ್ರೀಶಾರದಾಯ್ಯೆನಮಃ||

# ಕರ್ಣಾಟಕ ಧರ್ಮಸಿಂಧುಸಾರ.



## ಮೊದಲನೆಯ ಪರಿಚ್ಛೇದ.



[ ೧ ]

ಧರ್ಮಶಾಸ್ತ್ರದಲ್ಲಿ ಕಾಲವನ್ನು (೧) ಸಂವತ್ಸರ, (೨) ಅಯನ, (೩) ಋತು, (೪) ಮಾಸ, (೫) ಪಕ್ಷ, (೬) ದಿವಸ. ಎಂದು ಆರು ವಿಧವಾಗಿ ವಿಭಾಗಿಸಿದೆ.

ಇವುಗಳಲ್ಲಿ ಸಂವತ್ಸರವು "(೧) ಚಾಂದ್ರ, (೨) ಸೌರ, (೩) ಸಾವನ (೪) ನಾಕ್ಷತ್ರ, (೫) ಬಾರ್ಹಸ್ಪತ್ಯ" ಎಂದು ಐದು ಬಗೆಯಾಗಿರುವದು, ಇದರಲ್ಲಿ ಶುಕ್ಲಪಾಡ್ಯವು ಮೊದಲುಗೊಂಡು ಅಮಾಸ್ಯೆಯೇ ಕೊನೆಯಾದ ಚೈತ್ರಾದಿ ಸಂಜ್ಞೆಯುಳ್ಳ ಹನ್ನೆರಡು ತಿಂಗಳುಳ್ಳ ಒಟ್ಟು ಮುನ್ನೂರ ಐವತ್ತುನಾಲ್ಕು ದಿವಸಗಳುಳ್ಳ, ಅಧಿಕಮಾಸವು ಬಂದಿದ್ದರೆ ಹದಿಮೂರು ತಿಂಗಳಿನಿಂದ ಕೂಡಿದ ವರ್ಷಕ್ಕೆ ಚಾಂದ್ರಸಂವತ್ಸರವೆಂದು ಹೆಸರು. ಪ್ರಭವ, ವಿಭವ, ಶುಕ್ಲವೇ ಮೊದಲಾದ ಸಂಜ್ಞೆಯುಳ್ಳ ಅರುವತ್ತು ಸಂವತ್ಸರಗಳು ಈ ಚಾಂದ್ರ ಸಂವತ್ಸರಕ್ಕೇ ಸೇರಿದವುಗಳಾಗಿವೆ ಸೂರ್ಯನು ಮೇಷವೇ ಮೊದಲಾದ ಹನ್ನೆರಡು ರಾಶಿಗಳನ್ನು ಭೋಗಿಸಿದರೆ (೩೬೫) ದಿವಸಗಳಿಗೆ ಒಂದು ಸೌರಸಂವತ್ಸರವಾಗುತ್ತೆ. ಮುನ್ನೂರು ಅರವತ್ತು ದಿವಸಗಳಿಗೆ ಒಂದು ಸಾವನಸಂವತ್ಸರವಾಗುತ್ತೆ. ಮುಂದೆ ಹೇಳುವ ಹನ್ನೆರಡು ನಾಕ್ಷತ್ರಮಾಸಗಳುಳ್ಳ ವರ್ಷಕ್ಕೆ ನಾಕ್ಷತ್ರ ಸಂವತ್ಸರವೆಂದು ಹೆಸರು.

ಈ ನಾಕ್ಷತ್ರ ವರ್ಷದಲ್ಲಿ (೩೨೪) ದಿವಸಗಳು ಇರುತ್ತವೆ. ಮೇಷವೇ ಮೊದಲಾದ ಯಾವದಾದರೊಂದು ರಾಶಿಯನ್ನು ಬೃಹಸ್ಪತಿಯು ಭೋಗಿಸಿದರೆ ಬಾರ್ಹಸ್ಪತ್ಯ ಸಂವತ್ಸರವಾಗುತ್ತೆ. ಇದರಲ್ಲಿ (೩೬೧) ದಿವಸಗಳು ಇರುತ್ತವೆ ಕರ್ಮಗಳಿಗೆ ಮೊದಲು ಸಂಕಲ್ಪದಲ್ಲಿ ಚಾಂದ್ರ ಸಂವತ್ಸರವನ್ನೇ ಸ್ಮರಿಸಬೇಕೇ ಹೊರತು ಮತ್ತಾವ ಸಂವತ್ಸರವನ್ನೂ ಹೇಳಕೂಡದು.

ಅಯನವು, ದಕ್ಷಿಣಾಯಣವೆಂದೂ, ಉತ್ತರಾಯಣವೆಂದೂ ಎರಡು ಪ್ರಕಾರವಾಗಿರುತ್ತೆ. ಸೂರ್ಯನು ಕರ್ಕಾಟಕವೇ ಮೊದಲಾದ ಆರು ರಾಶಿಗಳನ್ನು ಅನುಭವಿಸುವದರಿಂದ **ದಕ್ಷಿಣಾಯನವೂ,** ಮಕರಾದಿಯಾಗಿ ಆರು ರಾಶಿಗಳನ್ನು ಅನುಭವಿಸುವದರಿಂದ **ಉತ್ತರಾಯಣವೂ** ಆಗುವವು.

ಋತುವು, ಸೌರಋತುವೆಂದೂ, ಚಾಂದ್ರಋತುವೆಂದೂ ಎರಡು ಪ್ರಕಾರವಾಗಿರುತ್ತೆ. ಮೀನವನ್ನು ಮೊದಲು ಮಾಡಿಕೊಂಡಾಗಲೀ ಮೇಷವನ್ನು ಮೊದಲು ಮಾಡಿಕೊಂಡಾಗಲೀ, ಎರಡೆರಡು ರಾಶಿಗಳನ್ನು ಸೂರ್ಯನು ಭೋಗಿಸಿದರೆ ವಸಂತವೇ ಮೊದಲಾದ ಆರು **ಸೌರಋತು**ಗಳಾಗುವವು. ಚೈತ್ರವನ್ನು ಮೊದಲು ಮಾಡಿಕೊಂಡು ಎರಡೆರಡು ತಿಂಗಳುಗಳಿಗೆ ಒಂದೊಂದರಂತೆ ಆಗುವ ವಸಂತಾದಿ ಆರು ಋತುಗಳು **ಚಾಂದ್ರಋತು**ಗಳಾಗಿವೆ ಮಲಮಾಸದಲ್ಲಿಯಾದರೋ ೯೦ ದಿನಗಳಿಗೆ ಸ್ವಲ್ಪ ಕಡಿಮೆಯಾಗಿ ಒಂದು ಚಾಂದ್ರಮಾನ ಋತುವಾಗುವದು. ಶ್ರೌತಸ್ಮಾರ್ತಾದಿ ಕರ್ಮಗಳಲ್ಲಿ ಚಾಂದ್ರಋತುವನ್ನು ಹೇಳುವುದೇ ಪ್ರಶಸ್ತವಾದದ್ದು.

ಮಾಸವು, ಚಾಂದ್ರ, ಸೌರ, ಸಾವನ, ನಾಕ್ಷತ್ರಗಳೆಂದು ನಾಲ್ಕು ಬಗೆಯಾಗಿದೆ ಶುಕ್ಲಪಕ್ಷದ ಪಾಡ್ಯವು ಮೊದಲುಗೊಂಡು ಅಮಾವಾಸ್ಯೆಯೇ ಕೊನೆಯಾದ, ಅಥವಾ ಬಹುಳ ಪಾಡ್ಯವು ಮೊದಲುಗೊಂಡು ಹುಣ್ಣಿಮೆಯೇ ಕೊನೆಯಾದ ತಿಂಗಳಿಗೆ **ಚಾಂದ್ರಮಾಸ**ವೆಂದು ಹೆಸರು. ಅದರಲ್ಲೂ ಶುಕ್ಲಪಾಡ್ಯದಿಂದ ಪ್ರಾರಂಭವಾಗುವ ಮಾಸವೇ ಮುಖ್ಯವಾದದ್ದು. ಕೃಷ್ಣಪಾಡ್ಯವು ಮೊದಲಾದ ಮಾಸವು ವಿಂಧ್ಯಪರ್ವತದ ಉತ್ತರ ದೇಶದಲ್ಲಿ ಮಾತ್ರ ಗ್ರಾಹ್ಯವಾಗಿರುವದು. ಚೈತ್ರವೇ ಮೊದಲಾದ ಸಂಜ್ಞೆಯುಳ್ಳ ಈ ಮಾಸಗಳನ್ನೇ ಕರ್ಮಗಳ ಪ್ರಾರಂಭದಲ್ಲಿ ಸ್ಮರಿಸತಕ್ಕದ್ದು.

ಕೆಲವರು ಮೀನರಾಶಿಯನ್ನು ಮೊದಲುಮಾಡಿಕೊಂಡು ಸೌರಸಂವತ್ಸರಕ್ಕೆ ಚೈತ್ರಾದಿ ಸಂಜ್ಞೆಯುಳ್ಳ ಮಾಸಗಳೆಂದು ಹೇಳುತ್ತಾರೆ.

ಸೂರ್ಯನ ಒಂದು ಸಂಕ್ರಮಣದಿಂದ ಮತ್ತೊಂದು ಸಂಕ್ರಮಣದ ವರೆಗಿನ ಕಾಲವು ಒಂದು **ಸೌರಮಾಸ**ನಾಗುವದು.

ಮೂವತ್ತು ದಿವಸಗಳಿಗೆ ಒಂದು **ಸಾವನಮಾಸ**ವಾಗುವದು.

ಚಂದ್ರನು ಅಶ್ವಿನಿಯೇ ಮೊದಲಾದ ಇಪ್ಪತ್ತೇಳು ನಕ್ಷತ್ರಗಳನ್ನು ಭೋಗಿಸುವ ಕಾಲಕ್ಕೆ **ನಾಕ್ಷತ್ರಮಾಸ**ವೆಂದು ಹೆಸರು

ಪಾಡ್ಯವು ಮೊದಲುಗೊಂಡು ಹುಣ್ಣಿಮೆಯೇ ಕೊನೆಯಾದ ಪಕ್ಷವು **ಶುಕ್ಲಪಕ್ಷ**ವು. ಪಾಡ್ಯವು ಮೊದಲುಗೊಂಡು ಅಮಾವಾಸ್ಯೆಯೇ ಕೊನೆಯಾಗಿ ಉಳ್ಳದ್ದು **ಕೃಷ್ಣಪಕ್ಷ**ವು.

ದಿವಸವು ಅರುವತ್ತು ಘಳಿಗೆಯುಳ್ಳದ್ದು.

ಇಲ್ಲಿಗೆ ಧರ್ಮಸಿಂಧುಸಾರದಲ್ಲಿ ಮೊದಲನೆಯ ಉದ್ದೇಶವು ಮುಗಿದುದು.

---

[ ೨ ]

## ಅನಂತರ ಸಂಕ್ರಾಂತಿ ನಿರ್ಣಯವು ಹೇಳಲ್ಪಡುತ್ತೆ.

ಸೂರ್ಯನು ಮೇಷರಾಶಿಯನ್ನೂ ತುಲಾರಾಶಿಯನ್ನೂ ಪ್ರವೇಶಿಸುವಾಗ ಪ್ರವೇಶಕಾಲಕ್ಕೆ ಮೊದಲು ಹದಿನೈದು ಘಳಿಗೆಗಳೂ ಪ್ರವೇಶಾನಂತರ ಹದಿನೈದು ಗಳಿಗೆಗಳೂ ಪುಣ್ಯಕಾಲವಾಗಿರುತ್ತೆ. ಹತ್ತು ಹತ್ತು ಗಳಿಗೆಗಳೆಂದು ಕೆಲವರ ಮತವಿದೆ. ಮಿಥುನ, ಕನ್ಯಾ, ಧನುಸ್ಸು, ಮತ್ತು ಮೀನ ಈ ರಾಶಿಗಳನ್ನು ಪ್ರವೇಶಿಸುವಾಗ ಪ್ರವೇಶಕಾಲಾನಂತರ ಹದಿನಾರು ಗಳಿಗೆಗಳು ಪುಣ್ಯಕಾಲವಾಗಿರುತ್ತೆ. ವೃಷಭ, ಸಿಂಹ, ವೃಶ್ಚಿಕ, ಮತ್ತು ಕುಂಭ ಈ ರಾಶಿಗಳನ್ನು ಪ್ರವೇಶಿಸುವಾಗ, ಪ್ರವೇಶಕಾಲಾತ್ಪೂರ್ವ ಹದಿನಾರುಗಳಿಗೆಗಳು ಪುಣ್ಯಕಾಲವಾಗಿರುವದು. ಕರ್ಕಾಟಕ ಸಂಕ್ರಮಣದಲ್ಲಿ ಪ್ರವೇಶಕಾಲಕ್ಕೆ ಮೊದಲು ಮೂವತ್ತು ಗಳಿಗೆಗಳೂ, ಮಕರಸಂಕ್ರಮಣದಲ್ಲಿ ಪ್ರವೇಶಕಾಲಾನಂತರ ನಾಲ್ವತ್ತುಗಳಿಗೆಗಳೂ ಪುಣ್ಯಕಾಲವಾಗಿರುವದು.

### ಇದಕ್ಕೆ ಅಪವಾದ.

ಹಗಲಿನಲ್ಲಿ ಸೂರ್ಯಾಸ್ತಕ್ಕೆ ಎರಡು ಗಳಿಗೆಯೇ ಮೊದಲಾದ ಅಲ್ಪ

ಕಾಲವು ಉಳಿದಿರುವಾಗ ಮಿಥುನ, ಕನ್ಯಾ, ಧನುಸ್ಸು, ಮೀನ ಸಂಕ್ರಾಂತಿಗಳೂ ಮಕರಸಂಕ್ರಾಂತಿಯೂ ಸಹ ಹುಟ್ಟಿದರೆ, ಆಗ ಹಿಂದಿನ ಗಳಿಗೆಗಳೇ ಪುಣ್ಯಕಾಲವಾಗುತ್ತೆ. ಪ್ರಾತಃಕಾಲದಲ್ಲಿ ಸೂರ್ಯೋದಯಾದಿ ಎರಡು ಗಳಿಗೆಯೇ ಮೊದಲಾದ ಅಲ್ಪಕಾಲದಲ್ಲಿ ವೃಷಭ, ಸಿಂಹ, ವೃಶ್ಚಿಕ, ಕುಂಭ ಸಂಕ್ರಾಂತಿಗಳೂ, ಕರ್ಕಾಟಕ ಸಂಕ್ರಾಂತಿಯೂ ಹುಟ್ಟಿದರೆ ಮುಂದಿನ ಗಳಿಗೆಗಳೇ ಪುಣ್ಯಕಾಲವಾಗುತ್ತೆ. ಕರ್ಕಾಟಕಸಂಕ್ರಾಂತಿಯು ಪ್ರಾತಃಕಾಲದಲ್ಲಾದಾಗ ಹಿಂದಿನ ದಿನದ ಹಗಲಿನಲ್ಲಿಯೇ ಪುಣ್ಯಕಾಲವೆಂದು ಕೆಲವರು ಹೇಳುವರು.

ಕರ್ಕಾಟಕ, ಮಕರಗಳು ಹೊರತು ಉಳಿದ ರಾಶಿಗಳಲ್ಲಿ ರಾತ್ರಿವೇಳೆಯಲ್ಲಿ ಅರ್ಧರಾತ್ರಿಗೆ ಮುಂಚೆ ಸಂಕ್ರಮಣವು ಹುಟ್ಟಿದರೆ ಆ ಹಗಲಿನ ಉತ್ತರಾರ್ಧವು ಅಂದರೆ ಮಧ್ಯಾಹ್ನದಿಂದ ಸಾಯಂಕಾಲದ ವರೆಗೂ ಪುಣ್ಯಕಾಲವು. ಅರ್ಧರಾತ್ರಿಯ ಮೇಲೆ ಸಂಕ್ರಮಣ ಹುಟ್ಟಿದರೆ ಮಾರನೆಯ ಹಗಲಿನ ಪೂರ್ವಾರ್ಧವು ಅಂದರೆ ಬೆಳಗಿನಿಂದ ಮಧ್ಯಾಹ್ನದ ವರೆಗೆ ಪುಣ್ಯಕಾಲವು. ಸರಿಯಾಗಿ ಅರ್ಧರಾತ್ರಿಯಲ್ಲಿಯೇ ಸಂಕ್ರಮಣವು ಹುಟ್ಟಿದರೆ, ಆ ಹಗಲಿನ ಉತ್ತರಾರ್ಧವೂ, ಮಾರನೆಯ ಹಗಲಿನ ಪೂರ್ವಾರ್ಧವೂ ಪುಣ್ಯಕಾಲವಾಗಿರುತ್ತೆ. ಅಯನ ಸಂಕ್ರಾಂತಿಗಳಲ್ಲಿಯೋ ಅಂದರೆ ಮಕರಸಂಕ್ರಾಂತಿಯು ರಾತ್ರಿವೇಳೆಯಲ್ಲಿ ಎಷ್ಟು ಹೊತ್ತಿನಲ್ಲಿ ಹುಟ್ಟಿದರೂ ಸರಿಯೇ ಮಾರನೆಯ ಹಗಲೇ ಪುಣ್ಯಕಾಲವು. ಕರ್ಕಾಟಕ ಸಂಕ್ರಾಂತಿಯು ರಾತ್ರಿಯಲ್ಲಾದಾಗ ಸಂಕ್ರಾಂತಿಗೆ ಹಿಂದಿನ ಹಗಲೇ ಪುಣ್ಯಕಾಲವು. ಸೂರ್ಯನು ಅಸ್ತನಾದ ಮೇಲೆ ಮೂರು ಗಳಿಗೆಯ ಕಾಲವು ಸಾಯಂಸಂಧ್ಯೆ ಎನಿಸಿಕೊಳ್ಳುವುದು. ಈ ಕಾಲದಲ್ಲಿ ಮಕರ ಸಂಕ್ರಾಂತಿಯಾದರೆ ಮುಂಚಿನ ಹಗಲೇ ಪುಣ್ಯಕಾಲವು. ಸೂರ್ಯನು ಉದಯವಾಗುವದಕ್ಕೆ ಹಿಂದೆ ಮೂರು ಗಳಿಗೆಯ ಕಾಲವು ಪ್ರಾತಃಸಂಧ್ಯೆ ಎನಿಸಿಕೊಳ್ಳುವದು. ಈ ಕಾಲದಲ್ಲಿ ಕರ್ಕಾಟಕಸಂಕ್ರಾಂತಿಯಾದರೆ ಮುಂದಿನ ಹಗಲೇ ಪುಣ್ಯಕಾಲವು, ಎಂದು ಸಂಧ್ಯಾಕಾಲದಲ್ಲಾಗುವ ಸಂಕ್ರಮಣಗಳಲ್ಲಿ ವಿಶೇಷ ವಿಧಿಯು ಜ್ಯೋತಿಶ್ಶಾಸ್ತ್ರದಲ್ಲಿ ಪ್ರಸಿದ್ಧವಾಗಿದೆ.

## ಸಂಕ್ರಮಣದಲ್ಲಿ ಮಾಡಬೇಕಾದ ದಾನಗಳು.

ಮೇಷಸಂಕ್ರಮಣದಲ್ಲಿ ಟಗರು, ವೃಷಭದಲ್ಲಿ ಗೋವು, ಮಿಥುನದಲ್ಲಿ

ಅನ್ನವಸ್ತ್ರವೇ ಮೊದಲಾದವುಗಳು, ಕರ್ಕಾಟಕದಲ್ಲಿ ಘೃತ, ಧೇನು, ಸಿಂಹ ದಲ್ಲಿ ಛತ್ರಿ ಮತ್ತು ಚಿನ್ನ, ಕನ್ಯಾದಲ್ಲಿ ಮನೆ ಮತ್ತು ಬಟ್ಟೆಗಳು, ತುಲಾ ದಲ್ಲಿ ಯೆಳ್ಳು, ಮತ್ತು ಆಕಳಹಾಲು ಮೊದಲಾದದ್ದು, ವೃಶ್ಚಿಕದಲ್ಲಿ ದೀಪ ಧನುಸ್ಸಿನಲ್ಲಿ ಬಟ್ಟೆಗಳು, ಮಕರದಲ್ಲಿ ಕಟ್ಟಿಗೆ ಮತ್ತು ಬೆಂಕಿ, ಕುಂಭದಲ್ಲಿ ಗೋವು, ಹುಲ್ಲು ಮತ್ತು ನೀರು, ಮೀನದಲ್ಲಿ ಭೂಮಿ ಮತ್ತು ಮಾಲಿಕೆಗಳು ಇವುಗಳನ್ನು ದಾನ ಮಾಡಬೇಕು. ಹೀಗೆಯೇ ಇತರ ದಾನಗಳನ್ನು ಊಹಿಸಿ ಮಾಡಬೇಕೆಂದು ತಿಳಿಯತಕ್ಕದ್ದಾಗಿದೆ.

## ಸಂಕ್ರಾಂತಿಯಲ್ಲಿ ಉಪವಾಸ.

ಕರ್ಕಾಟಕ, ಮಕರ, ಮೇಷ ಮತ್ತು ತುಲಾಸಂಕ್ರಾಂತಿಗಳಲ್ಲಿ ಹಿಂದೆ ಮೂರು ದಿವಸಗಳಾಗಲೀ, ಒಂದು ದಿವಸವಾಗಲೀ ಉಪವಾಸವಿದ್ದು ಸ್ನಾನ ದಾನಾದಿಗಳನ್ನು ಮಾಡಬೇಕು. ಕೊನೆಯ ಉಪವಾಸದ ದಿನವು ಸಂಕ್ರಾಂ ತವಾದ ದಿನವಾಗಲೀ, ಪುಣ್ಯಕಾಲವುಳ್ಳ ದಿನವಾಗಲೀ ಆಗುವಂತೆ ಸಂದ ರ್ಭಾನುಸಾರವಾಗಿ ಆಚರಿಸಬೇಕು. ಪುತ್ರವಂತನಾದ ಗೃಹಸ್ಥನು ಹೊರತು ಪಾಪವು ನಾಶವಾಗಬೇಕೆಂದು ಅಪೇಕ್ಷಿಸುವ ಮಿಕ್ಕಾದವರೆಲ್ಲರೂ ಈ ಉಪ ವಾಸವನ್ನು ಮಾಡಬಹುದು. ಇದು ಕಾಮ್ಯವೇ ಹೊರತು ನಿತ್ಯವಲ್ಲ.

## ಸಂಕ್ರಾಂತಿ ಶ್ರಾದ್ಧವಿಧಿ.

ಎಲ್ಲಾ ಸಂಕ್ರಾಂತಿಗಳಲ್ಲಿಯೂ ಪಿಂಡದಾನವಿಲ್ಲದೆ ಶ್ರಾದ್ಧವನ್ನು ಮಾಡಬೇಕು. ಅಯನ ಸಂಕ್ರಾಂತಿಗಳೆರಡರಲ್ಲೂ ಶ್ರಾದ್ಧವನ್ನು ಮಾಡಲೇ ಬೇಕು. ಇದು ನಿತ್ಯವು.

## ಅಯನಾಂಶ ನಿರ್ಣಯ.

ಅಯನಾಂಶಗಳು, ಸಂಕ್ರಮಣಗಳಿಗಿಂತ ಮುಂಚಿತವಾಗಿ ಬಂದಲ್ಲಿ ಆಯಾಯ ಸಂಕ್ರಾಂತಿಗಳಲ್ಲಿ ಮಾಡಬೇಕಾದ ದಾನಾದಿಗಳನ್ನು ಅಯ ನಾಂಶಗಳು ಬಂದ ಕಾಲದಲ್ಲೂ ಮಾಡಬೇಕು. ಅಯನಾಂಶಗಳು ಜ್ಯೋತಿ ಶ್ಶಾಸ್ತ್ರದಲ್ಲಿ ಪ್ರಸಿದ್ಧವಾಗಿವೆ. ಅವು ಈಗ ೧೭೧೨ ನೇ ಶಾಲಿವಾಹನ ಶಕದಲ್ಲಿ ಇಪ್ಪತ್ತೊಂದು ಅಯನಾಂಶಗಳಾಗಿವೆ. ಆದುದರಿಂದ ಸಂಕ್ರಮ ಣಕ್ಕೆ ಹಿಂದೆ ಪ್ರತಿ ಇಪ್ಪತ್ತೊಂದನೆಯ ದಿವಸದಲ್ಲೂ ಅಯನಾಂಶ ಪರ್ವ ಕಾಲವೆಂದು ಒಟ್ಟು ಅರ್ಥವಾಗುತ್ತೆ. ಹೆಚ್ಚು ಕಡಿಮೆಗಳಾದ ಶಕ ವರ್ಷ ಗಳಲ್ಲಿಯೂ ಹೀಗೆಯೇ ತಾರತಮ್ಯಾನುಸಾರ ಊಹಿಸಿ ತಿಳಿಯತಕ್ಕದು.

## ಸಂಕ್ರಮಣಗಳ ಸಂಜ್ಞೆ.

ವೃಷಭ, ಸಿಂಹ, ವೃಶ್ಚಿಕ, ಮತ್ತು ಕುಂಭಗಳಲ್ಲಾಗುವ ಸಂಕ್ರಾಂತಿಗೆ ವಿಷ್ಣುಪದ ಸಂಕ್ರಾಂತಿ ಎಂದೂ, ಮಿಥುನ, ಕನ್ಯಾ, ಧನುಸ್ಸು ಮತ್ತು ಮೀನಗಳಲ್ಲಾಗುವ ಸಂಕ್ರಾಂತಿಗೆ ಷಡಶೀತಿ ಸಂಕ್ರಾಂತಿಯೆಂದೂ ಮೇಷ ತುಲಾ ಸಂಕ್ರಾತಿಗಳಿಗೆ ವಿಷುವ ಸಂಕ್ರಾಂತಿಯೆಂದೂ, ಕರ್ಕಾಟಕ ಮತ್ತು ಮಕರ ಸಂಕ್ರಾಂತಿಗಳಿಗೆ ಅಯನ ಸಂಕ್ರಾಂತಿಯೆಂದೂ, ಹೆಸರು. ಈ ನಾಲ್ಕು ವಿಧವಾದ ಸಂಕ್ರಾಂತಿಗಳಲ್ಲಿ ಮುಂದೆ ಮುಂದಿನವುಗಳಲ್ಲಿ ಪುಣ್ಯವು ಹೆಚ್ಚು. ಅಂದರೆ ವಿಷ್ಣುಪದಕ್ಕಿಂತ ಷಡಶೀತಿ, ಷಡಶೀತಿಗಿಂತ ವಿಷುವ, ವಿಷುವಕ್ಕಿಂತ ಅಯನ ಈ ಸಂಕ್ರಾಂತಿಗಳಲ್ಲಿ ಪುಣ್ಯವು ಹೆಚ್ಚು.

ಸಂಕ್ರಾಂತಿಯಲ್ಲಿ ಮಂಗಳ ಕಾರ್ಯಗಳನ್ನು ಮಾಡಕೂಡದಾದಕಾಲ:—

ಎಲ್ಲಾ ಸಂಕ್ರಾಂತಿಗಳಲ್ಲೂ ಒಂದೇ ಸಮವಾಗಿ ಹಿಂದೆ ಮುಂದೆ ಸಹಾ ಹದಿನಾರು, ಹದಿನಾರು ಗಳಿಗೆಗಳ ಕಾಲದಲ್ಲಿ ಮಂಗಳ ಕಾರ್ಯಗಳನ್ನು ಮಾಡಬಾರದು.

ಚಂದ್ರಾದಿ ಗ್ರಹಗಳ ಸಂಕ್ರಾಂತಿಗಳಲ್ಲಿ ತ್ಯಾಜ್ಯಘಟಿಕೆಗಳು:—

ಚಂದ್ರ ಸಂಕ್ರಾಂತಿಯಲ್ಲಿ ಹಿಂದೆ ಒಂದು ಘಳಿಗೆ ಮುಂದೆ ಒಂದು ಘಳಿಗೆಯೂ, ಅಂಗಾರಕ ಸಂಕ್ರಾಂತಿಯಲ್ಲಿ ಹಿಂದೆ ಮುಂದೆ ಸಹ ಸೇರಿ ಒಂಬತ್ತು ಗಳಿಗೆಗಳೂ, ಬುಧ ಸಂಕ್ರಾಂತಿಯಲ್ಲಿ ಹಿಂದೆ ಮುಂದೆ ಸಹಾ ಸೇರಿ ಎರಡು ಗಳಿಗೆಗಳೂ ಗುರುಸಂಕ್ರಾಂತಿಯಲ್ಲಿ ೮೮ ಗಳಿಗೆಗಳೂ, ಶುಕ್ರಸಂಕ್ರಾಂತಿಯಲ್ಲಿ ೬ ಗಳಿಗೆಗಳೂ, ಶನಿಸಂಕ್ರಾಂತಿಯಲ್ಲಿ ನೂರಐವತ್ತು ಗಳಿಗೆಗಳೂ ಮಂಗಳ ಕಾರ್ಯಗಳಲ್ಲಿ ತ್ಯಾಜ್ಯವಾಗಿರುತ್ತವೆ.

ರಾತ್ರಿಯಲ್ಲಿ ಸಂಕ್ರಾಂತಿಯಾದರೆ ಗ್ರಹಣದಂತೆ ರಾತ್ರಿಯಲ್ಲಿಯೇ ಸ್ನಾನ-ದಾನಾದಿಗಳನ್ನು ಮಾಡಬೇಕೆಂದು ಕೆಲವರು ಹೇಳುವರು; ಸಂಕ್ರಮಣವು ರಾತ್ರಿಯಲ್ಲಾದರೂ ಸ್ನಾನ-ದಾನಾದಿಗಳನ್ನು ಹಗಲಿನಲ್ಲಿಯೇ ಮಾಡಬೇಕೆಂಬುವದು ಸರ್ವ ಸಮ್ಮತವಾಗಿದೆ. ಬಹು ದೇಶಗಳಲ್ಲಿ ನಡವಳಿಕೆಯು ಹೀಗೆಯೇ ಇರುತ್ತದೆ.

## ಜನ್ಮನಕ್ಷತ್ರದಲ್ಲಿ ಸಂಕ್ರಮಣವಾದರೆ ಶಾಂತಿ.

ಜನ್ಮನಕ್ಷತ್ರದಲ್ಲಿ ಸಂಕ್ರಮಣವಾದರೆ ದ್ರವ್ಯನಷ್ಟವೇ ಮೊದಲಾದ ವ್ಯಥೆಯುಂಟಾಗುವದು. ಅದರ ಪರಿಹಾರಕ್ಕಾಗಿ ಕಮಲಪತ್ರವೇ ಮೊದಲಾದವುಗಳಿಂದ ಕೂಡಿದ ನೀರಿನಲ್ಲಿ ಸ್ನಾನ ಮಾಡಬೇಕು.

ವಿಷುವ ಸಂಕ್ರಮಣಗಳಲ್ಲೂ ಅಯನ ಸಂಕ್ರಮಣಗಳಲ್ಲೂ ಅಧ್ಯಯನ ಮಾಡಕೂಡದಾದ ಕಾಲ:—

ವಿಷುವ ಮತ್ತು ಅಯನ ಸಂಕ್ರಾಂತಿಗಳು ಹಗಲಿನಲ್ಲಾದಾಗ, ಹಿಂದಿನ ರಾತ್ರಿ, ಆ ಹಗಲು, ಆ ದಿವಸದ ರಾತ್ರಿಗಳಲ್ಲಿ ಅಧ್ಯಯನ, ಅಧ್ಯಾಪನಗಳನ್ನು ಮಾಡಕೂಡದು. ರಾತ್ರಿಯಲ್ಲಿ ಸಂಕ್ರಾಂತಿಯಾದಾಗ, ಆ ರಾತ್ರಿಯಲ್ಲಿಯೂ, ಹಿಂದು ಮುಂದಿನ ಹಗಲುಗಳಲ್ಲಿಯೂ, ಅಧ್ಯಾಪನ ಅಧ್ಯಯನಗಳನ್ನು ಬಿಟ್ಟೇಬಿಡಬೇಕು. ಹೀಗೆ ಸಂಕ್ರಾಂತಿಯು ಪಕ್ಷಿಣೀಯಾಗಿರುತ್ತೆ. ಒಟ್ಟಿನಲ್ಲಿ ೧೨ ಯಾಮಪರ್ಯಂತ ಅಧ್ಯಯನಾದಿಗಳನ್ನು ಮಾಡಬಾರದೆಂದು ತಾತ್ಪರ್ಯವು. ಇನ್ನು ಕೆಲವು ಹೆಚ್ಚಿನ ಸಂಗತಿಗಳು ಅಯನ ಸಂಕ್ರಾಂತಿಗಳಲ್ಲಿ ಹೇಳಲ್ಪಡುತ್ತವೆ.

ಇಲ್ಲಿಗೆ ಸಂಕ್ರಾಂತಿ ವಿಷಯಕವಾದ ಎರಡನೆಯ ಉದ್ದೇಶವು ಮುಗಿದುದು.

---

## [ ೩ ]
## ಮಲಮಾಸ ನಿರ್ಣಯ.

ಮಲಮಾಸವು, ಅಧಿಕಮಾಸವೆಂದೂ, ಕ್ಷಯಮಾಸವೆಂದೂ ಎರಡು ಪ್ರಕಾರವಾಗಿರುತ್ತೆ. ಯಾವ ಮಾಸದಲ್ಲಿ ಸೂರ್ಯಸಂಕ್ರಾಂತಿಯು ಒರುವದಿಲ್ಲವೋ ಆ ಮಾಸಕ್ಕೆ ಅಧಿಮಾಸ (ಅಧಿಕಮಾಸ) ವೆಂದು ಹೆಸರು. ಯಾವ ಮಾಸದಲ್ಲಿ ಎರಡು ಸಂಕ್ರಾಂತಿಗಳು ಬರುತ್ತವೆಯೋ ಆ ತಿಂಗಳಿಗೆ ಕ್ಷಯಮಾಸವೆಂದು ಹೆಸರು. ಒಂದು ಅಧಿಕಮಾಸದಿಂದ ಮುಂದೆ ಬರುವ ಅಧಿಕಮಾಸವು ಮೂವತ್ತನೆಯ ತಿಂಗಳನ್ನಾರಂಭಿಸಿ ಎಂಟನೆಯ ಅಥವಾ ಒಂಬತ್ತನೆಯ ತಿಂಗಳಲ್ಲಿ ಯಾವದಾದರೊಂದಾಗುತ್ತೆ; ಕ್ಷಯಮಾಸವು ನೂರನಲವತ್ತೊಂದು ವರ್ಷಗಳಿಗಾಗಲೀ ಹತ್ತೊಂಬತ್ತು ವರ್ಷಗಳಿಗಾಗಲೀ ಆಗುತ್ತೆ. ಅಧಿಕಮಾಸದಂತೆ ಸ್ವಲ್ಪಕಾಲದಲ್ಲಾಗುವದಿಲ್ಲ,

ಕ್ಷಯಮಾಸವು ಕಾರ್ತಿಕ, ಮಾರ್ಗಶೀರ್ಷ, ಪುಷ್ಯ ಈ ತಿಂಗಳುಗಳಲ್ಲಿ ಯಾವದಾದರೊಂದು ತಿಂಗಳಲ್ಲಿಯಾಗುತ್ತದೆಯೇ ಹೊರತು ಮತ್ತಾವತಿಂಗಳಲ್ಲಿಯೂ ಆಗುವದಿಲ್ಲ. ಯಾವ ವರ್ಷದಲ್ಲಿ ಕ್ಷಯಮಾಸವು ಒದಗುವದೋ ಆ ವರ್ಷದಲ್ಲಿ ಎರಡು ಅಧಿಕಮಾಸಗಳು ಬರುತ್ತವೆ. ಹ್ಯಾಗಂದರೆ ಕ್ಷಯಮಾಸಕ್ಕೆ ಮುಂಚಿತವಾಗಿ ಒಂದು, ಕ್ಷಯಮಾಸಾನಂತರ ಒಂದು, ಹೀಗೆ ಎರಡು ಅಧಿಕಮಾಸಗಳಾಗುವವು.

## ಅಧಿಕಮಾಸಕ್ಕೆ ಉದಾಹರಣೆ.

ಚೈತ್ರಮಾಸದ ಅಮಾವಾಸ್ಯೆಯಲ್ಲಿ ಮೇಷಸಂಕ್ರಮಣವು ಆಗುತ್ತದೆ. ಅನಂತರ ಶುದ್ಧಪಾಡ್ಯವು ಮೊದಲ್ಗೊಂಡು ಅಮಾವಾಸ್ಯೆಯವರಿಗೂ ಸಂಕ್ರಮಣವು ಆಗುವದಿಲ್ಲ. ಆ ಮುಂದಿನ ಶುದ್ಧಪಾಡ್ಯದಲ್ಲಿ ವೃಷಭಸಂಕ್ರಮಣವು ಹುಟ್ಟುತ್ತೆ, ಎಂದು ಭಾವಿಸೋಣ ಈ ಸಂದರ್ಭದಲ್ಲಿ ಚೈತ್ರದ ಅಮಾವಾಸ್ಯಾನಂತರ ಸಂಕ್ರಾಂತಿರಹಿತವಾದ ಆ ತಿಂಗಳಿಗೆ ಅಧಿಕವೈಶಾಖವೆಂದೂ ವೃಷಭಸಂಕ್ರಾಂತಿಯಿಂದ ಕೂಡಿದ ಆ ಮುಂದಿನ ತಿಂಗಳಿಗೆ ಶುದ್ಧವೈಶಾಖವೆಂದೂ ಹೆಸರು.

## ಕ್ಷಯಮಾಸ ನಿರ್ಣಯ.

ಭಾದ್ರಪದ ಬಹುಳ ಅಮಾವಾಸ್ಯೆಯಲ್ಲಿ ಕನ್ಯಾ ಸಂಕ್ರಮಣವಾಗುತ್ತದೆ. ಅನಂತರ ಆಶ್ವಯುಜ ಮಾಸವು ಅಧಿಕಮಾಸವಾಗುತ್ತೆ. ಅನಂತರ ಶುದ್ಧ ಆಶ್ವಯುಜಮಾಸದ ಶುಕ್ಲ ಪಾಡ್ಯದಲ್ಲಿ ತುಲಾ ಸಂಕ್ರಾಂತಿಯೂ ಕಾರ್ತಿಕ ಶುಕ್ಲಪಾಡ್ಯದಲ್ಲಿ ವೃಶ್ಚಿಕ ಸಂಕ್ರಾಂತಿಯೂ ಆಗುತ್ತದೆ. ಅನಂತರ ಮಾರ್ಗಶೀರ್ಷ ಶುದ್ಧ ಪಾಡ್ಯದಲ್ಲಿ ಧನುಸ್ಸಂಕ್ರಮಣವೂ, ಅದೇ ಮಾಸದ ಅಮಾವಾಸ್ಯೆಯಲ್ಲಿ ಮಕರ ಸಂಕ್ರಾಂತಿಯೂ ಹುಟ್ಟುತ್ತವೆ. ಈ ಸಂದರ್ಭದಲ್ಲಿ ಧನಸ್ಸು ಮತ್ತು ಮಕರ ಈ ಎರಡು ಸಂಕ್ರಾಂತಿಗಳಿಂದಲೂ ಕೂಡಿದ ಆ ಒಂದು ತಿಂಗಳಿಗೆ ಕ್ಷಯಮಾಸವೆಂದು ಹೆಸರು. ಆ ಒಂದು ತಿಂಗಳಿನ್ನಲ್ಲಿಯೇ ಮಾರ್ಗಶೀರ್ಷ ಮತ್ತು ಪುಷ್ಯ ಈ ಎರಡು ಮಾಸಗಳೂ ಅಡಕವಾಗಿರುತ್ತವೆ ಎಂದು ತಿಳಿಯತಕ್ಕದ್ದು. ಆ ಮಾಸದ ಪಾಡ್ಯವೇ ಮೊದಲಾದ ತಿಥಿಗಳ ಪೂರ್ವಾರ್ಧದಲ್ಲಿ ಮಾರ್ಗಶೀರ್ಷಮಾಸವೂ ಉತ್ತರಾರ್ಧದಲ್ಲಿ ಪುಷ್ಯಮಾಸವೂ ಅಡಕವಾಗಿರುತ್ತವೆ. ಹೀಗೆ ಎಲ್ಲಾ ತಿಥಿಗಳೂ

ಆ ಎರಡು ಮಾಸಗಳನ್ನೂ ಒಳಗೊಂಡಿರುತ್ತವೆ. ಇಂಥಾ ಕ್ಷಯಮಾಸದಲ್ಲಿ ಯಾವದಾದರೊಂದು ತಿಥಿಯ ಪೂರ್ವಾರ್ಧದಲ್ಲಿ ಮೃತನಾದವನಿಗೆ ಮುಂದೆ ನಡಿಯಬೇಕಾದ ಪ್ರತಿವಾರ್ಷಿಕ ಶ್ರಾದ್ಧವು (ಕಾಲಶ್ರಾದ್ಧವು) ಮಾರ್ಗಶೀರ್ಷದಲ್ಲಿಯೇ ನಡಿಯಬೇಕು. ಅದೇ ತಿಥಿಯ ಉತ್ತರಾರ್ಧದಲ್ಲಿ ಮೃತನಾದವನಿಗೆ ಪುಷ್ಯಮಾಸದಲ್ಲಿ ನಡಿಯಬೇಕು. ಇಂಥಾ ಕ್ಷಯಮಾಸದಲ್ಲಿ ಹುಟ್ಟಿದವರಿಗೆ ವರ್ಷವರ್ಧಂತಿಯೇ ಮೊದಲಾದವುಗಳನ್ನು ಸಹಾ ಮೇಲೆ ಹೇಳಿದಂತೆಯೇ ಆಚರಿಸತಕ್ಕದ್ದು. ಮಾರ್ಗಶಿರ ಪುಷ್ಯಗಳೆಂಬ ಮಾಸದ್ವಯಾತ್ಮಕವಾದ ಈ ಕ್ಷಯಮಾಸದ ಶುಕ್ಲಪ್ರತಿಪತ್ತಿನಲ್ಲಿ ಧನುಸ್ಸಂಕ್ರಾಂತಿಯೂ, ಅದೇ ಬಹುಳ ಅಮಾವಾಸ್ಯೆಯಲ್ಲಿ ಮಕರಸಂಕ್ರಾಂತಿಯೂ, ಹೇಳಿದೆಯಷ್ಟೇ; ಇದಾದಮೇಲೆ ಮಾಘಬಹುಳ ಅಮಾವಾಸ್ಯೆಯಲ್ಲಿ ಕುಂಭಸ್ಸಂಕ್ರಮಣವೂ, ಅನಂತರ ಒಂದು (ಸಂಕ್ರಾಂತಿ ರಹಿತವಾದ) ಅಧಿಕ ಫಾಲ್ಗುಣ ಮಾಸವೂ, ಅನಂತರ ನಿಜಫಾಲ್ಗುಣ ಶುಕ್ಲಪಾಡ್ಯದಲ್ಲಿ ಮೀನ ಸಂಕ್ರಾಂತಿಯೂ ಬರುತ್ತದೆ. ಹೀಗೆ ಹಿಂದೆ ಮುಂದಿನ ಎರಡು ಅಧಿಕ ಮಾಸಗಳಿಂದ ಸಹಿತವಾದ ಇಂಥಾ ಕ್ಷಯಮಾಸವು ಯಾವ ವರ್ಷದಲ್ಲಿ ಬರುವದೋ ಆ ವರ್ಷದಲ್ಲಿ ೧೩ ತಿಂಗಳುಗಳೂ ಸ್ವಲ್ಪ ಕಡಿಮೆಯಾಗಿ ೩೯೦ ದಿವಸಗಳೂ ಇರುವವು. ಇಂಥಾ ಕ್ಷಯಮಾಸಕ್ಕೆ ಮುಂಚೆ ಬರುವ ಅಧಿಕ ಮಾಸಕ್ಕೆ **ಸಂಸರ್ಪ** ಎಂತ ಹೆಸರು. ಇದು ಎಲ್ಲಾ ಕರ್ಮಗಳಿಗೂ ಅರ್ಹವಾದದ್ದು. ಶುಭಕರ್ಮಗಳಲ್ಲಿ ಬಿಡಬೇಕಾಗಿಲ್ಲ. **ಅಂಹಸ್ಪತಿ** ಎಂಬ ಹೆಸರುಳ್ಳ ಕ್ಷಯಮಾಸವನ್ನೂ ಇದರ ಮುಂದಿನ ಅಧಿಕ ಮಾಸವನ್ನೂ ಸಹಾ ಎಲ್ಲ ಕರ್ಮಗಳಲ್ಲಿಯೂ ಬಿಟ್ಟು ಬಿಡಬೇಕು. ಇದರಂತೆಯೇ ಮೂರು ವರ್ಷಗಳ ಮಧ್ಯದಲ್ಲಿ ಬರುವ ಅಧಿಕ ಮಾಸವೂ ತ್ಯಾಜ್ಯವಾದದ್ದು.

[ ೪ ]

## ಮಲಮಾಸದಲ್ಲಿ ವರ್ಜ್ಯಾವರ್ಜ್ಯ ನಿರ್ಣಯ.

ಅನನ್ಯಗತಿಕಗಳಾದ(ಬೇರೆ ಅವಕಾಶವಿಲ್ಲದ) ನಿತ್ಯ ನೈಮಿತ್ತಿಕ ಕಾಮ್ಯ ಕರ್ಮಗಳನ್ನು ಅಧಿಕಮಾಸ ಕ್ಷಯಮಾಸಗಳಲ್ಲಿ ಸಹ ಮಾಡಬೇಕು. ಸಗತಿಕಗಳಾದ (ಬೇರೆಅವಕಾಶವುಳ್ಳ) ನಿತ್ಯ ನೈಮಿತ್ತಿಕ ಕಾಮ್ಯಕರ್ಮಗಳನ್ನು ಬಿಟ್ಟೇಬಿಡಬೇಕು. ಅಂದರೆ ಸಂಧ್ಯಾವಂದನೆ, ಅಗ್ನಿಹೋತ್ರವೇ ಮೊದಲಾದ ನಿತ್ಯಕರ್ಮಗಳೂ, ಗ್ರಹಣಸ್ನಾನಾದಿ ನೈಮಿತ್ತಿಕಕರ್ಮಗಳೂ, (ವೃಷ್ಟಿಯನ್ನುಂಟುಮಾಡುವ) ಕಾರೀರ್ಯಾದಿ ಯಾಗಗಳೂ, ರಾಕ್ಷಸಾದಿ ಗ್ರಹಪೀಡಿತರಾದವರನ್ನು ಬದುಕಿಸುವದಕ್ಕಾಗಿ ಮಾಡುವ ರಕ್ಷೋಘ್ನಯಾಗವೇ ಮೊದಲಾದ ಕಾಮ್ಯಕರ್ಮಗಳೂ ಸಹ ಅನನ್ಯಗತಿಕಗಳಾದುದರಿಂದ ಮಲಮಾಸದಲ್ಲಿಯೂ ಮಾಡಬೇಕು. ಜ್ಯೋತಿಷ್ಟೋಮವೇ ಮೊದಲಾದ ನಿತ್ಯವನ್ನು ಜಾತೇಷ್ಟ್ಯಾದಿ ನೈಮಿತ್ತಿಕವನ್ನೂ ಪುತ್ರಕಾಮೇಷ್ಟಿಯೇ ಮೊದಲಾದ ಕಾಮ್ಯಗಳು ಸಹ ಸಗತಿಕಗಳಾದುದರಿಂದ ಇವುಗಳನ್ನು ಮಲಮಾಸಾನಂತರ ಶುದ್ಧ ಮಾಸದಲ್ಲಿಯೇ ಮಾಡಬೇಕು. ಆರಂಭಿಸಿದ ಕಾಮ್ಯಕರ್ಮವನ್ನು ಮಲಮಾಸದಲ್ಲಿಯೂ ಮಾಡಬೇಕು. ಹೊಸದಾಗಿ ಆರಂಭಿಸುವದಾಗಲೀ ಮುಗಿಸುವದಾಗಲೀ ಮಲಮಾಸದಲ್ಲಿ ಆಗದು; ಹಾಗೂ (೧) ಪೂಜೆಯು ನಿಂತು ಹೋಗುವದೆಂಬ ಉದ್ದೇಶದಿಂದ ಪುನಃ ಮಾಡುವ ಮೂರ್ತಿ ಪ್ರತಿಷ್ಠೆಯನ್ನೂ, (೨) ಗರ್ಭಾಧಾನ ಮೊದಲುಗೊಂಡು ಅನ್ನಪ್ರಾಶನಾಂತಗಳಾದ ಆಯಾಯ ಕಾಲಗಳಲ್ಲಿ ನಡಿಯಬೇಕಾದ ಅನನ್ಯಗತಿಕಗಳಾದ ಸಂಸ್ಕಾರಗಳನ್ನೂ (೩) ಜ್ವರವೇ ಮೊದಲಾದ ರೋಗಪರಿಹಾರಕ್ಕಾಗಿ ಶಾಂತಿಯನ್ನೂ (೪) ಅಲಭ್ಯವಾದ ಯೋಗವು ಒದಗಿದರೆ ತನ್ನಿಮಿತ್ತಕವಾದ ಶ್ರಾದ್ಧ ವ್ರತಾದಿಗಳನ್ನೂ (೫) ನೈಮಿತ್ತಿಕ ಪ್ರಾಯಶ್ಚಿತ್ತವನ್ನೂ (೬) ನಿತ್ಯಶ್ರಾದ್ಧವನ್ನೂ (೭) ಊನಮಾಸಿಕಾದಿ ಶ್ರಾದ್ಧಗಳನ್ನೂ ದರ್ಶಶ್ರಾದ್ಧವನ್ನೂ ಸಹ, ಮಲಮಾಸದಲ್ಲಿಯೂ ಮಾಡಬೇಕು.

ಚೈತ್ರವೇ ಮೊದಲಾದಾದ ಯಾವದಾದರೊಂದು ಮಲಮಾಸದಲ್ಲಿ ಮೃತನಾದವನಿಗೆ ಯಾವಾಗಲಾದರೂ ಬಹುಕಾಲದ ಮೇಲೆ ಮಲಮಾಸವಾಗಿ ಅದೇ ಚೈತ್ರಾದಿಮಾಸವು ಬಂದೊದಗಿದರೆ ಪ್ರತಿಸಾಂವತ್ಸರಿಕ ಶ್ರಾದ್ಧ

ವನ್ನು ಮಲಮಾಸದಲ್ಲಿಯೇ ಮಾಡಬೇಕು. ಚೈತ್ರವೇ ಮೊದಲಾದ ಶುದ್ಧ ಮಾಸದಲ್ಲಿ ಮೃತನಾದವನಿಗೆ ಪ್ರತ್ಯಾಬ್ದಿಕ ಶ್ರಾದ್ಧವನ್ನು ಮಲಮಾಸದಲ್ಲಿ ಮಾಡಕೂಡದು. ಅದೇ ಚೈತ್ರಾದಿ ಶುದ್ಧಮಾಸದಲ್ಲಿಯೇ ಮಾಡಬೇಕು.

## ಮಲಮಾಸದಲ್ಲಿ ಪ್ರಥಮಾಬ್ದಿಕಾದಿ ಶ್ರಾದ್ಧ ವಿಚಾರ.

ಆದರೆ ಶುದ್ಧಮಾಸದಲ್ಲಿ ಮೃತನಾದವನಿಗೂ ಪ್ರಥಮಾಬ್ದಿಕವನ್ನು (ಮೊದಲನೆಯ ವರ್ಷದ ಶ್ರಾದ್ಧ) ಮಲಮಾಸದಲ್ಲಿಯೇ ಮಾಡಬೇಕೇ ಹೊರತು ಶುದ್ಧ ಮಾಸದಲ್ಲಿ ಕೂಡದು. ದ್ವಿತೀಯಾಬ್ದಿಕ(೨ನೇ ವರ್ಷದ ಶ್ರಾದ್ಧ)ವನ್ನು ಶುದ್ಧಮಾಸದಲ್ಲಿಯೇ ಮಾಡಬೇಕು ಹನ್ನೊಂದುದಿವಸದ ವರೆಗಿನ ಕರ್ಮಗಳನ್ನು ಸಪಿಂಡೀಕರಣವನ್ನು ಮಲಮಾಸದಲ್ಲಿಯಾದರೂ ಮಾಡಬೇಕು. ದ್ವಿತೀಯ ಮಾಸಿಕಾದಿ ಶ್ರಾದ್ಧಗಳನ್ನು ಮಲಮಾಸದಲ್ಲಿಯೂ ಶುದ್ಧಮಾಸದಲ್ಲಿಯೂ ಸಹ ತಿರಿಗಿಸಿ ಎರಡು ಸಾರಿ ಮಾಡಬೇಕು. ಈ ಸಂದರ್ಭದಲ್ಲಿ ಯಾವ ವರ್ಷದಲ್ಲಿ ದ್ವಾದಶ (ಹನ್ನೆರಡನೆಯ) ಮಾಸಿಕವು ಮಲಮಾಸದಲ್ಲಿ ಬರುವದೋ ಆಗ ಹನ್ನೆರಡನೆಯ ಮಾಸಿಕವನ್ನು ಮಲಮಾಸದಲ್ಲಿಯೂ, ಶುದ್ಧಮಾಸದಲ್ಲಿಯೂ ಸಹ ಆವೃತ್ತಿಯಿಂದ ಎರಡು ಸಾರಿ ಮಾಡಿ ಊನಾಬ್ದಿಕಕಾಲದಲ್ಲಿ [ವರ್ಷವು ತುಂಬುವದಕ್ಕೆ ಮುಂಚೆ] ಊನಾಬ್ದಿಕವನ್ನೂ ಮಾಡಿ, ಹದಿನಾಲ್ಕನೆಯ ತಿಂಗಳಲ್ಲಿ ಪ್ರಥಮಾಬ್ದಿಕವನ್ನು ಮಾಡಬೇಕು. ಅಧಿಕಮಾಸವಾದ ಒಡನೆಯೇ ವ್ಯವಧಾನವಿಲ್ಲದೆ ಕ್ಷಯಮಾಸವು ಬರುವ ವರ್ಷದಲ್ಲಿ ಅಂದರೆ ಕಾರ್ತಿಕವು ಅಸಂಕ್ರಾಂತವಾದ ಅಧಿಕಮಾಸವಾಗಿದ್ದು, ಅದರ ಉತ್ತರಮಾಸವೇ ವೃಶ್ಚಿಕ, ಧನುಸ್ಸಂಕ್ರಾಂತಿಗಳಿಂದ ಯುಕ್ತವಾಗೋಣದರಿಂದ ಕ್ಷಯಸಂಜ್ಞೆಯನ್ನು ಹೊಂದಿದರೆ ಆಗ ಕಾರ್ತಿಕಮಾಸದಲ್ಲಾಗಬೇಕಾದ ಪ್ರತ್ಯಾಬ್ದಿಕಶ್ರಾದ್ಧವನ್ನು ಹಿಂದಿನ ಅಧಿಕಮಾಸದಲ್ಲಿಯೂ, ಮುಂದಿನ ಕ್ಷಯಮಾಸದಲ್ಲಿಯೂ ಸಹ ಮಾಡಬೇಕು; ಮತ್ತು ಯಾವಾಗಲಾದರೂ ಅಧಿಕಮಾಸವು ಕ್ಷಯಮಾಸದ ಹಿಂದಿನ ತಿಂಗಳೇ ಆಗದೇ ಮಧ್ಯವ್ಯವಧಾನವಿದ್ದು ಬರುವದಾದರೆ, ಹೇಗಂದರೆ ಆಶ್ವಯುಜವು ಅಧಿಕಮಾಸವಾಗಿ ಮಾರ್ಗಶೀರ್ಷವು ಕ್ಷಯಮಾಸವಾದರೆ ಆಗ ಅಧಿಕಶುದ್ಧಗಳೆರಡೂ ಕರ್ಮಾರ್ಹಗಳಾದುದರಿಂದ ಆಶ್ವಯುಜಮಾಸದಲ್ಲಿ ನಡಿಯಬೇ

ಕಾದ ಶ್ರಾದ್ಧವನ್ನು ಅಧಿಕಾಶ್ವಯುಜ ಮತ್ತು ಶುದ್ಧಾಶ್ವಯುಜ ಈ ಎರಡು ತಿಂಗಳುಗಳಲ್ಲಿಯೂ ಮಾಡಬೇಕೆಂದು ತೋರುತ್ತದೆ. [ಇದು ಧರ್ಮಸಿಂಧುಕಾರರ ಸ್ವಂತ ಅಭಿಪ್ರಾಯವು.] ಇಂಥಾ ವ್ಯವಹಿತ ಮಧ್ಯವ್ಯವಧಾನವಿದ್ದು ಬರುವ ಕ್ಷಯಮಾಸದಲ್ಲಾಗಬೇಕಾದ ಪ್ರತ್ಯಾಬ್ದಿಕವನ್ನು ಕ್ಷಯಮಾಸದಲ್ಲಿಯೇ ಆಚರಿಸಬೇಕು. ಏವಂಚ, ಹಿಂದೆ ಹೇಳಿದ ಮಾರ್ಗಶೀರ್ಷಕ್ಷಯೋದಾಹರಣೆಯಲ್ಲಿ ಮಾರ್ಗಶೀರ್ಷ, ಪುಷ್ಯ ಈ ಎರಡು ತಿಂಗಳುಗಳಲ್ಲಿ ನಡೆಯಬೇಕಾದ ಕಾಲಶ್ರಾದ್ಧಗಳನ್ನು ಆ ಒಂದು ತಿಂಗಳಲ್ಲಿಯೇ ತಿಥಿಯ ಮೊದಲನೆಯ ಅರ್ಧ, ಕೊನೆಯ ಅರ್ಧವೆಂಬ ವಿಭಾಗವಿಲ್ಲದೆಯೇ ಆಚರಿಸಬೇಕೆಂದು ಫಲಿತಾರ್ಥವು.

---

[ ೫ ]

## ಮಲಮಾಸದಲ್ಲಿ ತ್ಯಾಜ್ಯಗಳು.

ಉತ್ಸರ್ಜನ, ಉಪಾಕರ್ಮ, ಅಷ್ಟಕಾಶ್ರಾದ್ಧ ಇವುಗಳನ್ನು ಅಧಿಕಮಾಸದಲ್ಲಿ ಮಾಡಕೂಡದು. ಚೌಲ, ಉಪನಯನ, ವಿವಾಹ, ತೀರ್ಥಯಾತ್ರೆ, ವಾಸ್ತುಕರ್ಮ(ಮನೆಕಟ್ಟುವದು) ಗೃಹಪ್ರವೇಶ, ದೇವತಾಪ್ರತಿಷ್ಠೆ, ಭಾವಿ ಗುಂಪು ತೋಪು ಇತ್ಯಾದಿಗಳನ್ನು ಬಿಡುವದು, ನೂತನ ವಸ್ತ್ರಾಭರಣಧಾರಣ, ತುಲಾಪುರುಷದಾನವೇ ಮೊದಲಾದ ಮಹಾದಾನಗಳು, ಯಜ್ಞಕರ್ಮ, ಆಧಾನ, ಹಿಂದೆ ಯಾವಾಗಲೂ ನೋಡದಿರುವ ತೀರ್ಥ ಮತ್ತು ದೇವತಾ ದರ್ಶನಗಳು, ಸನ್ಯಾಸ, ಕಾಮ್ಯ ವೃಷೋತ್ಸರ್ಗ, ರಾಜಾಭಿಷೇಕ, ಸಗತಿಕವಾದ (ಬೇರೆ ಅವಕಾಶವುಳ್ಳ) ಅನ್ನಪ್ರಾಶನ, ವ್ರತಸಮಾವರ್ತನ, ಅತಿಕ್ರಾಂತವಾದ ನಾಮಕರಣವೇ ಮೊದಲಾದ ಸಂಸ್ಕಾರಗಳು ಪವಿತ್ರಾ(೧)ರೋಪಣ, ದಮನಾ(೨)ರ್ಪಣ, ಶ್ರವಣಾ(೩)ಕರ್ಮ, ಸರ್ಪಬಲಿ(೪)ಯೇ ಮೊದಲಾದ ಪಾಕಸಂಸ್ಥೆಗಳು, ಶಯನಪರಿ(೫)ವರ್ತನಾದಿಉತ್ಸವಗಳು, ಶಪ(೬)ಥಾದಿ ದಿವ್ಯಕರ್ಮಗಳೂ ಸಹ ಮಲಮಾಸದಲ್ಲಿ ವರ್ಜ್ಯಗಳಾಗಿವೆ.

---

(೧)-(೨)-(೩)-(೪)-(೫)-(೬) ಇವು ೨ನೇ ಪರಿಚ್ಛೇದದಲ್ಲಿ ವಿವರಿಸಲ್ಪಡುತ್ತವೆ.

ನೈಮಿತ್ತಿಕಗಳಾದ, ರಜೋದರ್ಶನಶಾಂತಿ, ವಿಚ್ಛಿನ್ನಾಧಾನ, ಪುನಃ ಮೂರ್ತಿಪ್ರತಿಷ್ಠೆ ಇವೇ ಮೊದಲಾದವುಗಳನ್ನು ಆಯಾಯ ಕ್ಲಪ್ತಕಾಲದಲ್ಲಿಯೇ ಮಾಡುವದಾದರೆ ಆಗ ಮಲಮಾಸವೇ ಮೊದಲಾದ ದೋಷಗಳಿಲ್ಲ. ಆಯಾಯ ಕ್ಲಪ್ತಕಾಲವು ವಿಾರಿಹೋದಲ್ಲಿ ಶುದ್ಧಮಾಸದಲ್ಲಿಯೇ ಮಾಡಬೇಕು. ಆಗ್ರಯಣಕರ್ಮವನ್ನು ಶುದ್ಧಮಾಸದಲ್ಲಿಯೇ ಮಾಡಬೇಕು; ಆದರೆ ಕಾಮ್ಯನಿಮಿತ್ತವಾದ ಸಂಕಟವು ಒದಗಿದರೆ ಮಾತ್ರ ಮಲಮಾಸದಲ್ಲಿ ಮಾಡಬಹುದು. ಯುಗಾದಿಮನ್ವಾದಿ ಶ್ರಾದ್ಧಗಳನ್ನು ಮಲಮಾಸ ಶುದ್ಧಮಾಸಗಳೆರಡರಲ್ಲಿಯೂ ಮಾಡಬೇಕು. ಕ್ಷಯಮಾಸಕ್ಕೆ ಮುಂಚೆ ಬರುವ ಅಧಿಕಮಾಸವು ಸಂಸರ್ಪಸಂಜ್ಞೆಯುಳ್ಳದ್ದೆಂದು ಹೇಳಿದೆಯಷ್ಟೇ! ಈ ಸಂಸರ್ಪಮಾಸದಲ್ಲಿ ಚೂಡಾಕರ್ಮ, ಉಪನಯನ, ವಿವಾಹ, ಅಗ್ನ್ಯಾಧಾನ, ಯಜ್ಞ, ಉತ್ಸವ, ಮಹಾಲಯ, ರಾಜಾಭಿಷೇಕ ಇವುಗಳು ಮಾತ್ರವೇ ತ್ಯಾಜ್ಯಗಳಾಗಿವೆ. ಮತ್ತಾವಕರ್ಮಗಳನ್ನೂ ಬಿಡಬೇಕಾದುದಿಲ್ಲ. ಹೊಸದಾಗಿ ವ್ರತವನ್ನಾರಂಭಿಸುವದೂ ವ್ರತಪರಿಸಮಾಪ್ತಿಯೂ ಸಹ ಮಲಮಾಸದಲ್ಲಿ ಆಗದು. ಹಿಂದಿನಿಂದಲೂ ಬಂದ ಮಾಘಸ್ನಾನಾದಿಗಳು ಕ್ಷಯಮಾಸದಲ್ಲಿಯೂ ಆಗಬಹುದು. ಮಕರಸಂಕ್ರಾಂತಿಯಿಂದ ಕೂಡಿದ ಕ್ಷಯಮಾಸದ ಹುಣ್ಣಿಮೆಯಲ್ಲಿ ಮಾಘಸ್ನಾನವನ್ನು ಮೊದಲು ಮಾಡಿ ಕುಂಭಸಂಕ್ರಾಂತಿಯಿಂದ ಯುಕ್ತವಾದ ಮಾಘಮಾಸದ ಪೂರ್ಣಿಮಾದಲ್ಲಿ ಮುಗಿಸಬೇಕು. ಕಾರ್ತಿಕಮಾಸದಲ್ಲಿಯೂ ಹೀಗೆಯೇ ಊಹಿಸಿಕೊಳ್ಳಬೇಕು. ವೈಶಾಖಮಾಸವೇ ಮೊದಲಾದವುಗಳು ಅಧಿಕಮಾಸವಾದಾಗ ವೈಶಾಖಸ್ನಾನವೇ ಮೊದಲಾದ ಮಾಸವ್ರತಗಳನ್ನು ಚೈತ್ರಶುಕ್ಲಪೂರ್ಣಿಮಾದಲ್ಲಿ ಪ್ರಾರಂಭಿಸಿ, ಶುದ್ಧವೈಶಾಖದ ಪೂರ್ಣಿಮಾದಲ್ಲಿ ಪರಿಸಮಾಪ್ತಿ ಮಾಡಬೇಕು. ಹೀಗೆ ಅಂಥಾವ್ರತಗಳಿಗೆಲ್ಲಾ ಎರಡು ತಿಂಗಳ ಆಚರಣೆಯು.

ಗುರು-ಶುಕ್ರರ ಅಸ್ತಾದಿಗಳಲ್ಲಿಯೂ, ಗುರುವು ಸಿಂಹರಾಶಿಯಲ್ಲಿರುವಾಗಲೂ ಬಿಡಬೇಕಾದವುಗಳು:—

ಮಲಮಾಸದಲ್ಲಿ ಮಾಡಬಾರದೆಂದು ಹೇಳಿರುವದನ್ನೆಲ್ಲಾ ಗುರುಶುಕ್ರರ ಅಸ್ತ ಮತ್ತು ಬಾಲ್ಯವಾರ್ಧಕಗಳಲ್ಲಿಯೂ ಮಾಡಬಾರದೆಂದು ತಿಳಿಯತಕ್ಕದ್ದು. ಇವರಲ್ಲಿ ಅಸ್ತಕ್ಕೆ ಮುಂಚೆ ಏಳು ದಿವಸಗಳು ವಾರ್ಧಕವೆಂತಲೂ,

ಉದಯಾನಂತರ ಏಳು ದಿವಸಗಳು ಬಾಲ್ಯವೆಂತಲೂ ಸಂಜ್ಞೆ; ಇದು ಮಧ್ಯಮಪಕ್ಷವು. ಹದಿನೈದು ದಿವಸಗಳು, ಐದು ದಿವಸಗಳು, ಮೂರು ದಿವಸಗಳು ಎಂಬ ಪಕ್ಷಗಳನ್ನು ಆಪತ್ಕಾಲ ಅನಾಪತ್ಕಾಲ ವಿಷಯವಾಗಿಯೂ ದೇಶವಿಶೇಷಪರವಾಗಿಯೂ ಉಪಯೋಗಿಸಿಕೊಳ್ಳಬೇಕು. ಈ ವರ್ಜ್ಯಾವರ್ಜ್ಯನಿರ್ಣಯವು ಗುರುವು ಸಿಂಹದಲ್ಲಿರುವಾಗಲೂ ತಿಳಿಯತಕ್ಕದ್ದು. ಇದರಲ್ಲಿ ಹೆಚ್ಚಿನ ಅಂಶವೇನಂದರೆ, ಕರ್ಣವೇಧ, ಚೌಲ, ಉಪನಯನ, ವಿವಾಹ, ದೇವಯಾತ್ರೆ, ವ್ರತ, ಮನೇಕಟ್ಟುವದಕ್ಕೆ ಪ್ರಾರಂಭಿಸುವದು, ದೇವತಾಪ್ರತಿಷ್ಠೆ ಮತ್ತು ಸನ್ಯಾಸ ಇವುಗಳನ್ನು ಗುರುವು ಸಿಂಹದಲ್ಲಿರುವಾಗ ಬಿಟ್ಟೇಬಿಡಬೇಕು.

## ಸಿಂಹಸ್ಥಾಪವಾದ.

ಗುರುವು ಮಘಾನಕ್ಷತ್ರದಲ್ಲಿಯಾಗಲೀ ಸಿಂಹಾಂಶದಲ್ಲಿಯಾಗಲೀ ಇರುವಾಗ ಎಲ್ಲಾ ದೇಶಗಳಲ್ಲಿಯೂ, ಸಕಲವಿಧವಾದ ಮಂಗಳ ಕಾರ್ಯಗಳೂ ನಿಷೇಧಿಸಲ್ಪಟ್ಟಿವೆ. ಸಿಂಹಾಂಶವನ್ನು ದಾಟಿದ ಮೇಲೆ ಗೋದಾವರೀನದಿಯ ದಕ್ಷಿಣದಲ್ಲಿರುವ ದೇಶಗಳಿಗೂ ಗಂಗಾನದಿಯ ಉತ್ತರದಲ್ಲಿರುವ ದೇಶಗಳಿಗೂ ಸಿಂಹದಲ್ಲಿರುವ ದೋಷವಿಲ್ಲ. ಗಂಗಾ-ಗೋದಾವರಿಗಳ ಮಧ್ಯದೇಶದಲ್ಲಿ ಮಾತ್ರ ಗುರುವು ಸಿಂಹದಲ್ಲಿರುವ ಕಾಲದಲ್ಲಿ ಸಂಪೂರ್ಣವಾಗಿ, ವಿವಾಹ ಮತ್ತು ಉಪನಯನಗಳನ್ನು ಮಾಡಕೂಡದು. ಮಿಕ್ಕ ಕರ್ಮಗಳನ್ನೆಲ್ಲ ಸಿಂಹಾಂಶವು ಕಳೆದ ಮೇಲೆ ಎಲ್ಲಾ ದೇಶದಲ್ಲಿಯೂ ಮಾಡಬಹುದು. ಸೂರ್ಯನು ಮೇಷರಾಶಿಯಲ್ಲಿದ್ದ ಪಕ್ಷದಲ್ಲಿ, ಗುರುವು ಸಿಂಹದಲ್ಲಿ ಎಲ್ಲಿದ್ದರೂ ಯಾವ ದೇಶದಲ್ಲಿಯೂ ದೋಷವಿಲ್ಲ. ಸೂರ್ಯನು ವೃಷಭದಲ್ಲಿರುವಾಗಲೂ ಸಿಂಹಸ್ಥ ದೋಷವಿಲ್ಲವೆಂದು ಕೆಲವು ಕಡೆಗಳಲ್ಲಿ ಹೇಳಿ ಇದೆ. ಗುರುವು, ಸಿಂಹದಲ್ಲಿರುವಾಗ ಗೋದಾವರೀ ಸ್ನಾನವೂ, ಕನ್ಯಾರಾಶಿಯಲ್ಲಿರುವಾಗ ಕೃಷ್ಣಾನದೀ ಸ್ನಾನವೂ, ಮಹಾಪುಣ್ಯಪ್ರದಗಳಾಗಿವೆ. ಯಾತ್ರಿಕರಿಗೆ ಗೋದಾವರಿಯಲ್ಲಿ ಮುಂಡನ ಮತ್ತು ಉಪವಾಸಗಳು ಅವಶ್ಯಕಗಳು. ಅದರ ತೀರದಲ್ಲಿಯೇ ವಾಸಮಾಡತಕ್ಕವರಿಗೆ ಮೇಲಿನ ವಿಧಿಯು ಅನ್ವಯಿಸತಕ್ಕದ್ದಲ್ಲ. ಹೆಂಡತಿಯು ಗರ್ಭಿಣಿಯಾಗಿದ್ದರೂ, ವಿವಾಹವೇ ಮೊದಲಾದ ಮಂಗಳಕಾರ್ಯಗಳ ಉತ್ತರದಲ್ಲಿಯೂ

ಸಹಾ, ಗೋದಾವರಿಯಲ್ಲಿ ಮುಂಡನ ಮಾಡಿಸುವದರಲ್ಲಿ ದೋಷವಿಲ್ಲ. ಗಯಾ ಮತ್ತು ಗೋದಾವರಿಗಳ ಯಾತ್ರೆಯಲ್ಲಿ ಮಲಮಾಸ ಮತ್ತು ಗುರು ಶುಕ್ರರ ಅಸ್ತದೋಷವಿಲ್ಲ. ಮಲಮಾಸದಲ್ಲಿ ಮಾಡಬೇಕಾದ ವ್ರತವಿಶೇಷ ಗಳನ್ನು ಗ್ರಂಥಾಂತರದಿಂದ ತಿಳಿದುಕೊಳ್ಳಬೇಕು.

ಇಲ್ಲಿಗೆ ಮಲಮಾಸ, ಗುರು ಶುಕ್ರರ ಅಸ್ತದಲ್ಲಿಯೂ, ಗುರುವು ಸಿಂಹ ದಲ್ಲಿರುವಾಗಲೂ ಮಾಡಬೇಕಾದ, ಮತ್ತು ಬಿಡಬೇಕಾದವುಗಳ ನಿರ್ಣಯ ವೆಂಬ ಮೂರನೆಯ ಉದ್ದೇಶವು ಮುಗಿದುದು.

---

[ ೬ ]

## ತಿಥಿ ನಿರ್ಣಯದಲ್ಲಿ ತಿಳಿಯಬೇಕಾದ ಸಾಮಾನ್ಯ ಪರಿಭಾಷೆ.

ತಿಥಿಯು **ಪೂರ್ಣ** ತಿಥಿ ಎಂತಲೂ ಸಖಂಡ ತಿಥಿ ಎಂತಲೂ ಎರಡು ಪ್ರಕಾರವಾಗಿರುತ್ತೆ. ಸೂರ್ಯೋದಯ ಕಾಲದಲ್ಲಾರಂಭಿಸಿ, ಅರವತ್ತು ಘಳಿಗೇಪರ್ಯಂತವಾಗಿ ವ್ಯಾಪಿಸಿರುವ ತಿಥಿಗೆ **ಪೂರ್ಣತಿಥಿ** ಎಂದು ಹೆಸರು. ಇದಕ್ಕೆ ಬದಲಾಗಿರುವದಕ್ಕೆ **ಸಖಂಡ** ವೆಂದು ಹೆಸರು. ಸಖಂಡವು ಶುದ್ಧಾ ವಿದ್ಧಾ ಎಂದು ಎರಡು ಬಗೆಯಾಗಿರುತ್ತದೆ. ಸೂರ್ಯೋದಯ ಕಾಲವನ್ನು ಮೊದಲು ಮಾಡಿಕೊಂಡು, ಸೂರ್ಯನು ಅಸ್ತನಾಗುವವರೆಗೂ ಶಿವರಾತ್ರಿಯೇ ಮೊದಲಾದವುಗಳಲ್ಲಿ ಅರ್ಧ ರಾತ್ರಿಯ ವರೆಗೂ ಇರುವ ತಿಥಿಯು **ಶುದ್ಧತಿಥಿಯು.** ಇದಕ್ಕೆ ಭಿನ್ನವಾದದ್ದು **ವಿದ್ಧತಿಥಿಯು.** ವೇಧೆಯೂ, ಸಾಯಂವೇಧೆ, ಪ್ರಾತರ್ವೇಧೆ ಎಂದು ಎರಡು ಪ್ರಕಾರವಾಗಿ ರುತ್ತೆ. ಸೂರ್ಯೋದಯಾನಂತರದಲ್ಲಿ ಆರು ಗಳಿಗೆಗಳವರಿಗೆ ಇರುವ ಬೇರೇ ತಿಥಿಯು ಸ್ಪರ್ಶವಿದ್ದರೆ **ಪ್ರಾತರ್ವೇಧೆಯು.** ಸೂರ್ಯಾಸ್ತಕ್ಕೆ ಮುಂಚೆ ಆರು ಗಳಿಗೆಗಳವರಿಗಿರುವ ಬೇರೇ ತಿಥಿಯು ಸ್ಪರ್ಶವಿದ್ದರೆ **ಸಾಯಂವೇ ಧೆಯು.** ಏಕಾದಶೀ ವಿಷಯದಲ್ಲಿ ವೇಧೆಯು ಮುಂದೆ ಹೇಳಲ್ಪಡುತ್ತದೆ. ಕೆಲವು ತಿಥಿವಿಶೇಷಗಳಲ್ಲಿ ವೇಧೆಯು ಹೆಚ್ಚುತ್ತದೆ; (ಹೇಗಂದರೆ) ಪಂಚ ಮಿಯು ಹನ್ನೆರಡು ಗಳಿಗೆಗಳಿದ್ದರೇ ಷಷ್ಠಿಯನ್ನು ವಿದ್ಧವನ್ನಾಗಿ ಮಾಡು ತ್ತದೆ. ದಶಮಿಯು ಹದಿನೈದು ಗಳಿಗೆಗಳಿಂದ ಏಕಾದಶಿಯನ್ನು ವಿದ್ಧವ ನ್ನಾಗಿ ಮಾಡುತ್ತದೆ. ಚತುರ್ದಶಿಯು ಹುಣ್ಣುಮೆಯನ್ನು ಹದಿನೈದು

ಗಳಿಗೆಗಳಿಂದ ವೇಧಿಸುತ್ತದೆ. ಕೆಲವು ಕರ್ಮಗಳಲ್ಲಿ ವಿದ್ಧ ತಿಥಿಗಳು ಗ್ರಾಹ್ಯಗಳಾಗಿಯೂ, ಕೆಲವು ಕರ್ಮಗಳಲ್ಲಿ ತ್ಯಾಜ್ಯಗಳಾಗಿಯೂ ಇರುತ್ತವೆ. ಇವುಗಳಲ್ಲಿ ಪೂರ್ಣತಿಥಿಯೂ ಶುದ್ಧ ತಿಥಿಯೂ ಸಹ ನಿಸ್ಸಂದೇಹವಾಗಿರೋಣದರಿಂದ ಪ್ರಾಯಕವಾಗಿ ನಿರ್ಣಯವನ್ನು ಅಪೇಕ್ಷಿಸುವದಿಲ್ಲ. ನಿಷೇಧವಿಷಯದಲ್ಲಿ ಸಖಂಡ ತಿಥಿಯನ್ನು ನಿರ್ಣಯ ಮಾಡಬೇಕಾಗಿರುವದಿಲ್ಲ. ಯಾಕಂದರೆ "ನಿಷೇಧಸ್ತು ನಿವೃತ್ತ್ಯಾತ್ಮಾಕಾಲಮಾತ್ರಮಪೇಕ್ಷತೆ" ಎಂಬ ವಾಕ್ಯದಿಂದ ನಿವೃತ್ತಿ ಎಂಬ ಅರ್ಥ ಉಳ್ಳ ನಿಷೇಧ ಶಬ್ದವು ಕಾಲಮಾತ್ರವನ್ನು ಅಪೇಕ್ಷಿಸುತ್ತದೆ ಅಷ್ಟಮಿಯೇ ಮೊದಲಾದವುಗಳಲ್ಲಿ ತೆಂಗಿನಕಾಯಿಯೇ ಮೊದಲಾದವುಗಳನ್ನು ತಿನ್ನಬಾರದೆಂಬ ನಿಷೇಧಾದಿಗಳು ಆಯಾಯ ಕಾಲದಲ್ಲಿ ಮಾತ್ರ ವ್ಯಾಪ್ತವಾಗಿರುವ ತಿಥಿಯನ್ನು ಅಪೇಕ್ಷಿಸುತ್ತಿರುವವು. ಆದುದರಿಂದ ವಿಹಿತಗಳಾದ (ಮಾಡಬೇಕಾದ) ವ್ರತಾದಿಗಳ ವಿಷಯದಲ್ಲಿ ನಿರ್ಣಯವು ಹೇಳಲ್ಪಡುವುದು. ಇದರಲ್ಲಿ, ಯಾವ ಕರ್ಮಕ್ಕೆ ಯಾವ ಕಾಲವು ಉಕ್ತವಾಗಿರುವದೋ ಆ ಕಾಲವ್ಯಾಪನೆಯುಳ್ಳ ತಿಥಿಯನ್ನು ಪರಿಗ್ರಹಿಸಬೇಕು. ಹ್ಯಾಗಂದರೆ ವಿನಾಯಕಾದಿ ವ್ರತಗಳಲ್ಲಿ ಮಧ್ಯಾಹ್ನವೇ ಮೊದಲಾದ ಕಾಲಗಳಲ್ಲಿ ಪೂಜಾದಿಗಳನ್ನು ಹೇಳಿರುವದರಿಂದ, ಅಲ್ಲಿ ಮಧ್ಯಾಹ್ನಾದಿ ವ್ಯಾಪ್ತಿಯುಳ್ಳ ತಿಥಿಯನ್ನು ಸ್ವೀಕರಿಸಬೇಕು. ಎರಡು ದಿನಗಳಲ್ಲಿಯೂ ಕರ್ಮಕಾಲದಲ್ಲಿ ವ್ಯಾಪ್ತಿ ಇದ್ದರೂ, ಇಲ್ಲದಿದ್ದರೂ ಅಥವಾ, ಅದರ (ಕರ್ಮಕಾಲದ) ಒಂದು ಭಾಗದಲ್ಲಿ ವ್ಯಾಪಿಸಿದ್ದರೂ ಯುಗ್ಮವಾಕ್ಯಾದಿಗಳನ್ನನುಸರಿಸಿ, ಪೂರ್ವ ವಿದ್ಧವಾದ ತಿಥಿಯೋ ಅಥವಾ ಪರವಿದ್ಧವಾದ ತಿಥಿಯೋ ಗ್ರಾಹ್ಯವಾಗಿರುತ್ತೆ. ಯುಗ್ಮವಾಕ್ಯವೇನಂದರೆ--

"ಯುಗ್ಮಾಗ್ನಿ ಯುಗಭೂತಾನಾಂ ಷಣ್ಮುನ್ಯೋರ್ವಸುರಂಧ್ರಯೋಃ || ರುದ್ರೇಣದ್ವಾದಶೀಯುಕ್ತಾ ಚತುರ್ದಶ್ಯಾಚ ಪೂರ್ಣಿಮಾ || ಪ್ರತಿಪದ್ಯಪ್ಯಮಾವಾಸ್ಯಾತಿಥ್ಯೋರ್ಯುಗ್ಮಂ ಮಹಾ ಫಲಂ ||"
ಯುಗ್ಮವೆಂದರೆ ಬಿದಿಗೆ, ಅಗ್ನಿ ಅಂದರ ತದಿಗೆ, [ ಆದ್ದರಿಂದ ] ತದಿಗೇ ವಿದ್ಧವಾದ ಬಿದಿಗೆಯನ್ನೂ, ಬಿದಿಗೆ ವಿದ್ಧವಾದ ತದಿಗೆಯನ್ನೂ ಗ್ರಹಿಸಬೇಕು. ಈ ಕ್ರಮದಲ್ಲಿ ಬಿದಿಗೆ-ತದಿಗೆಗಳೆರಡೂ ಸೇರಿ ಒಂದು ಯುಗ್ಮವು.

ಚೌತಿ-ಪಂಚಮಿಗಳು ಒಂದು ಯುಗ್ಮವು. ಷಷ್ಠಿ-ಸಪ್ತಮಿಗಳು ಒಂದು ಯುಗ್ಮವು. ಅಷ್ಟಮಿ-ನವಮಿಗಳು ಒಂದು ಯುಗ್ಮವು. ಏಕಾದಶಿ-ದ್ವಾದಶಿಗಳು ಒಂದು ಯುಗ್ಮವು. ಚತುರ್ದಶೀ ಪೂರ್ಣಿಮಾಸೀಗಳು ಒಂದು ಯುಗ್ಮವು. ಅಮಾವಾಸ್ಯಾ ಪ್ರತಿಪತ್ತುಗಳು ಒಂದು ಯುಗ್ಮವು ಎಂದು ತಾತ್ಪರ್ಯವು.

"ಚತುರ್ಥೀ ಗಣನಾಥಸ್ಯ ಮಾತೃ ವಿದ್ಧಾ ಪ್ರಶಸ್ಯತೇ" ವಿನಾಯಕ ಚತುರ್ಥಿಯು ಗೌರೀ ತದಿಗೆಯ ವೇಧೆಯುಳ್ಳದ್ದಾಗಿರುವದು ಪ್ರಶಸ್ತವಾದದ್ದು. ಇತ್ಯಾದಿ ವಿಶೇಷ ವಚನಗಳಿಂದ ಕೆಲವು ಕಡೆಗಳಲ್ಲಿ ಗ್ರಾಹ್ಯ ತಿಥಿಯನ್ನು ನಿರ್ಣಯಿಸಬೇಕು. ವಿಶೇಷ ವಚನಗಳಿಂದ ಗ್ರಾಹ್ಯವಾದ ತಿಥಿಗೆ ಕರ್ಮಕಾಲದಲ್ಲಿ ವ್ಯಾಪನೆ ಇಲ್ಲದಿದ್ದರೂ * "ಯಾಂತಿಥಿಂ ಸಮನುಪ್ರಾಪ್ಯ ಉದಯಂ ಯಾತಿಭಾಸ್ಕರಃ || ಸಾತಿಥಿಸ್ಸಕಲಾಜ್ಞೇಯಾ ಸ್ನಾನ ದಾನ ಜಪಾದಿಷು || ೧ || ಯಾಂತಿಥಿಂ ಸಮನುಪ್ರಾಪ್ಯ ಯಾತ್ಯಸ್ತಂ ಪದ್ಮಿನೀಪ್ರಿಯಃ || ಸಾತಿಥಿಸ್ಸಕಲಾಜ್ಞೇಯಾ ಸ್ನಾನದಾನಾದಿ ಕರ್ಮಸು || ೨ ||" ಎಂಬ ಸಾಕಲ್ಯ ವಚನಗಳ ಪ್ರಕಾರ ಕರ್ಮಕಾಲವ್ಯಾಪನೆ ಇದ್ದಂತೆಯೇ ಭಾವಿಸಬೇಕು.

ಇಲ್ಲಿಗೆ ತಿಥಿಸಾಮಾನ್ಯ ನಿರ್ಣಯವೆಂಬ ೪ ನೆಯ ಉದ್ದೇಶವು ಮುಗಿದುದು.

---

## [೫]
## ಕರ್ಮವಿಶೇಷದಲ್ಲಿ ನಿರ್ಣಯ.

ಕರ್ಮಗಳು ದೇವತಾ ಸಂಬಂಧವಾದದ್ದೆಂತಲೂ ಪಿತೃಸಂಬಂಧವಾದದ್ದೆಂತಲೂ ಎರಡು ವಿಧವಾಗಿರುತ್ತವೆ. ಅದರಲ್ಲಿ ದೇವಕರ್ಮಗಳು (೧) ಏಕಭಕ್ತ (೨) ನಕ್ತ (೩) ಅಯಾಚಿತ (೪) ಉಪವಾಸ (೫) ವ್ರತ (೬) ದಾನಗಳೆಂದು ಆರು ಪ್ರಕಾರವಾಗಿವೆ.

---

* ೧ ಯಾವ ತಿಥಿಯಲ್ಲಿ ಸೂರ್ಯನು ಉದಯಿಸುವನೋ ಆ ತಿಥಿಯೇ ಆ ದಿನವೆಲ್ಲಾ ಸಮಗ್ರವಾಗಿ ಇರುವದೆಂದು ಸ್ನಾನ ದಾನ ಜಪಾದಿಗಳ ವಿಷಯದಲ್ಲಿ ತಿಳಿಯಬೇಕು. ೨ ಯಾವ ತಿಥಿಯಲ್ಲಿ ಸೂರ್ಯನು

## ಏಕಭಕ್ತಾದಿಗಳ ಸ್ವರೂಪಗಳು.

ಮಧ್ಯಾಹ್ನದಲ್ಲಿ ಒಂದು ಸಾರಿ ಒಂದು ವಿಧವಾದ ಅನ್ನವನ್ನು ಭೋಜನವಮಾಡುವದು **ಏಕಭಕ್ತ**ವೆನಿಸುವದು. ರಾತ್ರಿಯಲ್ಲಿಯೇ ಪ್ರದೋಷ ಕಾಲದಲ್ಲಿ ಭೋಜನ ಮಾಡುವದು **ನಕ್ತ**ವೆನಿಸುವದು. ಯಾಚನೆ ಮಾಡದೆ ಆ ದಿನದಲ್ಲಿ ಲಭಿಸಿದ್ದನ್ನು ಭುಜಿಸುವದು **ಅಯಾಚಿತ**ವೆನಿಸುವದು. ಬೇರೆ ದಿನದಲ್ಲಿ ಸಂಪಾದಿಸಲ್ಪಟ್ಟದ್ದನ್ನಾದರೂ ಪಕ್ವಮಾಡುತ್ತಿರುವ ಪತ್ನೀಪುತ್ರಾದಿಗಳನ್ನು ಯಾಚಿಸದೆ ಭೋಜನ ಮಾಡುವದೂ ಅಯಾಚಿತವೆಂದು ಕೆಲವರ ಹೇಳುವರು. ಹಗಲು-ರಾತ್ರಿಗಳೆರಡರಲ್ಲಿಯೂ ಊಟ ಮಾಡದೆ ಇರವದು **ಉಪವಾಸ**ವೆನಿಸುವದು. ಯಾವದಾದರೊಂದು ವಸ್ತುವಿನಲ್ಲಿ ತನಗಿರುವ ಸ್ವತ್ವವನ್ನು ಪರಿತ್ಯಾಗ ಮಾಡುವದರ ಪೂರ್ವಕವಾಗಿ (ಈಶ್ವರಾಯತ್ತ ಪ್ರತಿಫಲ ಉಳ್ಳವನಾಗಿ) ಮತ್ತೊಬ್ಬನ ಸ್ವಾಧೀನ ಪಡಿಸೋಣವು **ದಾನ**ವೆನಿಸುವದು. ಈ ಏಕಭಕ್ತಾದಿಗಳು ಕೆಲವು ಕಡೆಗಳಲ್ಲಿ ವ್ರತಾದಿಗಳಿಗೆ ಅಂಗವಾಗಿಯೂ, ಕೆಲವು ಕಡೆಗಳಲ್ಲಿ ಏಕಾದಶಿಯೇ ಮೊದಲಾದ ಉಪವಾಸಕ್ಕೆ ಪ್ರತಿನಿಧಿಯಾಗಿಯೂ, ಕೆಲವು ಕಡೆಗಳಲ್ಲಿ ಸ್ವತಂತ್ರಗಳಾಗಿಯೂ ಹೇಳಲ್ಪಟ್ಟಿವೆ. ಹೀಗೆ ಮೂರು ವಿಧವಾಗಿವೆ. ಇದರಲ್ಲಿ ಮತ್ತೊಂದ ಕರ್ಮಕ್ಕೆ ಅಂಗವಾಗಿ ಬಂದವುಗಳಿಗೂ ಪ್ರತಿನಿಧಿಯಾಗಿ ಬಂದವುಗಳಿಗೂ ಕೂಡ ಆಯಾಯ ಪ್ರಧಾನ ಕರ್ಮಕ್ಕನುಸಾರವಾಗಿ ನಿರ್ಣಯಿಸಬೇಕು. ಸ್ವತಂತ್ರಗಳಾದವಕ್ಕೆ ನಿರ್ಣಯವೇನಂದರೆ— ಹಗಲನ್ನು ಐದುಭಾಗವಾಗಿ ಭಾಗಿಸಬೇಕು. ಅದರಲ್ಲಿ ಮೊದಲನೆಯ ಭಾಗವನ್ನು ಪ್ರಾತಃಕಾಲವೆಂತಲೂ, ಎರಡನೆಯ ಭಾಗವನ್ನು ಸಂಗಮಕಾಲವೆಂತಲೂ, ಮೂರನೆಯ ಭಾಗವನ್ನು ಮಧ್ಯಾಹ್ನವೆಂತಲೂ ನಾಲ್ಕನೆಯ ಭಾಗವನ್ನು ಅಪರಾಹ್ಣವೆಂತಲೂ ಐದನೆಯ ಭಾಗವನ್ನು ಸಾಯಾಹ್ನವೆಂ

---

ಅಸ್ತನಾಗುವನೋ ಸ್ನಾನದಾನಾದಿ ಕರ್ಮಗಳ ವಿಷಯದಲ್ಲಿ ಆ ದಿನವೆಲ್ಲಾ ಸಮಗ್ರವಾಗಿ ಆ ತಿಥಿಯೇ ಇರುವದೆಂದು ತಿಳಿಯಬೇಕು. ಅಂದರೆ ಉದಯಾನಂತರದಲ್ಲಿ ೨ ಮುಹೂರ್ತಕ್ಕಿಂತ ಹೆಚ್ಚಾಗಿರುವ ತಿಥಿಗೂ, ಅಸ್ತಕ್ಕೆ ಮುಂಚೆ ೩ ಮುಹೂರ್ತಗಳಿಗಿಂತ ಹೆಚ್ಚಾಗಿರುವ ತಿಥಿಗೂ ಸಹ ಸಾಕಲ್ಯ ವ್ಯಾಪ್ತಿಯು ಪ್ರಾಯಶಃ ಎರಡು ಪ್ರಕಾರವಾಗಿರುತ್ತೆಂದು ತಿಳಿಯತಕ್ಕದ್ದು.

ತಲೂ ತಿಳಿಯತಕ್ಕದ್ದು. ಸೂರ್ಯಾಸ್ತಾನಂತರ ಮೂರು ಮುಹೂರ್ತ ಕಾಲಕ್ಕೆ ಪ್ರದೋಷಕಾಲವೆಂದು ಹೆಸರು.

## ಏಕಭಕ್ತ ನಿರ್ಣಯ.

ಏಕಭಕ್ತದ ವಿಚಾರದಲ್ಲಿ ಮಧ್ಯಾಹ್ನವ್ಯಾಪಿನಿಯಾದ ತಿಥಿಯನ್ನು ಪರಿಗ್ರಹಿಸಬೇಕು. ಅದರಲ್ಲಿಯೂ, ಹಗಲಿನಲ್ಲಿ ಸಮಾರ್ಧವು ಕಳೆದ ಮೇಲೆ ಅಂದರೆ (ಮಸಲಾ) ಮುವ್ವತ್ತು ಘಳಿಗೆ ಪ್ರಮಾಣ ಉಳ್ಳ ಹಗಲಿನಲ್ಲಿ ಹದಿನೈದು ಘಳಿಗೆಗಳು ಕಳೆದ ಮೇಲೆ ಹದಿನಾರನೆಯದೇ ಮೊದಲಾದ ಮೂರು ಘಳಿಗೆಗಳು ಮುಖ್ಯವಾದ ಭೋಜನಕಾಲವಾಗಿರತ್ತದೆ. ಅದರ ಮೇಲೆ ಸಾಯಂಕಾಲದ ವರೆಗೂ ಗೌಣಕಾಲವು. ವ್ಯಾಪ್ತಿಯಲ್ಲಿ ಆರು ಪಕ್ಷಗಳಿವೆ. ಹ್ಯಾಗೆಂದರೆ (೧) ಹಿಂದಿನ ದಿನದಲ್ಲಿಯೇ ಮುಖ್ಯ ಕಾಲದಲ್ಲಿ ವ್ಯಾಪ್ತಿ ಇರೋಣವು ಒಂದನೆಯದು. (೨) ಮಾರನೆಯ ದಿನದಲ್ಲಿಯೇ ವ್ಯಾಪ್ತಿ ಇರೋಣವು ಎರಡನೆಯದು. (೩) ಎರಡು ದಿವಸಗಳಲ್ಲಿಯೂ ವ್ಯಾಪ್ತಿ ಇರೋಣವು ಮೂರನೆಯದು. (೪) ಎರಡು ದಿವಸಗಳಲ್ಲಿಯೂ ವ್ಯಾಪ್ತಿ ಇಲ್ಲದೆ ಇರೋಣವು ನಾಲ್ಕನೆಯದು. (೫) ಎರಡು ದಿವಸಗಳಲ್ಲಿಯೂ ಮುಖ್ಯಕಾಲದ ಏಕದೇಶದಲ್ಲಿ ಸಮವಾಗಿ ವ್ಯಾಪ್ತಿ ಇರೋಣವು ಐದನೆಯದು. (೬) ಎರಡು ದಿವಸಗಳಲ್ಲಿಯೂ, ಮುಖ್ಯ ಕಾಲದ ಏಕದೇಶದಲ್ಲಿ ವಿಷಮವಾಗಿ(ಹೆಚ್ಚು ಕಡಿಮೆಯಾಗಿ)ವ್ಯಾಪ್ತಿ ಇರೋಣವು ಆರನೆಯದು. ಹೀಗೆ ಆರು ಪಕ್ಷಗಳು ಇವೆ. ಇವುಗಳಲ್ಲಿ ಗ್ರಾಹ್ಯತಿಥಿಯು ಹಿಂದಿನ ದಿನದಲ್ಲಿಯೇ [ಮುಖ್ಯ ಕಾಲದಲ್ಲಿ] ಇದ್ದರೆ ಹಿಂದಿನ ದಿನವೇ, ಮಾರನೆಯ ದಿನದಲ್ಲಿದ್ದರೆ ಮಾರನೆಯ ದಿನವೇ ಎಂಬುವದರಲ್ಲಿ ಸಂದೇಹವೇ ಇಲ್ಲ. ಎರಡು ದಿವಸಗಳಲ್ಲಿಯೂ ಪೂರ್ಣವಾಗಿ ವ್ಯಾಪಿಸಿದ್ದರೆ ಯುಗ್ಮವಾಕ್ಯದಂತೆ ನಿರ್ಣಯಿಸಬೇಕು. ಎರಡು ದಿವಸಗಳಲ್ಲಿಯೂ ವ್ಯಾಪ್ತಿಯು ಇಲ್ಲದಿದ್ದರೆ ಗೌಣಕಾಲದಲ್ಲಿ ವ್ಯಾಪನೆಯು ಇರುವದರಿಂದ ಹಿಂದಿನ ದಿನದಲ್ಲಿಯೇ ಆಚರಿಸಬೇಕು. ಎರಡು ದಿವಸಗಳಲ್ಲಿಯೂ ಸಮವಾಗಿ [ಮುಖ್ಯ ಕಾಲದ] ಏಕದೇಶದಲ್ಲಿ ವ್ಯಾಪ್ತಿಯು ಇದ್ದರೆ, ಹಿಂದಿನ ದಿನವೇ ಆಚರಿಸಬೇಕು. ವಿಷಮವಾಗಿ ಏಕದೇಶದಲ್ಲಿ ವ್ಯಾಪನೆಯು ಇರುವಾಗ ಎರಡು ದಿವಸಗಳಲ್ಲಿಯೂ ಕರ್ಮಕ್ಕೆ ಸಾಕಾಗುವಷ್ಟು ತಿಥಿಯು ಸಿಕ್ಕುವದಾದರೆ

ಆಗ ಯುಗ್ಮವಾಕ್ಯದಂತೆ ನಿರ್ಣಯಿಸಬೇಕು. ಕರ್ಮಕ್ಕೆ ಸಾಕಾಗುವಷ್ಟು ತಿಥಿಯು ಸಿಕ್ಕದಿದ್ದರೆ, ಆಗ ಹಿಂದಿನ ದಿನವೇ ಆಚರಿಸಬೇಕು. ಹೀಗೆ ಏಕಭಕ್ತವು.

## ಅನಂತರ ನಕ್ತನಿರ್ಣಯವು.

ನಕ್ತದಲ್ಲಿ ಸೂರ್ಯಾಸ್ತಾನಂತರ ಮೂರು ಮುಹೂರ್ತಾತ್ಮಕವಾದ ಪ್ರದೋಷಕಾಲದಲ್ಲಿ ವ್ಯಾಪ್ತಿಯುಳ್ಳ ತಿಥಿಯನ್ನು ಪರಿಗ್ರಹಿಸಬೇಕು. ಅಂಥಾ ವ್ಯಾಪ್ತಿಯು ಪೂರ್ವಾಪರ ದಿನಗಳ ಮಧ್ಯೆ ಯಾವದಿನದಲ್ಲಿರುತ್ತೋ ಅಥವಾ ಯಾವ ದಿನದ ಏಕದೇಶದಲ್ಲಿಯಾದರೂ ಸ್ಪರ್ಶವಿರುತ್ತೋ ಆ ದಿನವನ್ನು ಗ್ರಹಿಸಬೇಕು. ಅಸ್ತಾನಂತರ ಸಂಧ್ಯಾಕಾಲವಾದ ಮೂರು ಘಳಿಗೆಗಳ ಕಾಲವನ್ನು ಬಿಟ್ಟು ಊಟಮಾಡಬೇಕು. ಸಂಧ್ಯಾಕಾಲದಲ್ಲಿ ಊಟವೂ, ನಿದ್ರೆಯೂ, ಮೈಥುನವೂ, ಅಧ್ಯಯನವೂ ನಿಷಿದ್ಧಗಳಾಗಿವೆ. ಯತಿಗಳಿಗೂ, ಅಪುತ್ರವಂತರಿಗೂ, ಆಪತ್ನೀಕರಿಗೂ, ವಿಧವೆಯರಿಗೂ ರಾತ್ರೀಕಾಲದಲ್ಲಿ ಭೋಜನವು ನಿಷಿದ್ಧವಾಗಿರುವದರಿಂದ ಅವರು ನಕ್ತವನ್ನು ಸಾಯಾಹ್ನ ವ್ಯಾಪ್ತಿಯುಳ್ಳ ತಿಥಿಯಲ್ಲಿ ಹಗಲಿನ ಎಂಟನೆಯ ಭಾಗದಲ್ಲಿ [30 ಗಳಿಗೆ ಅಹಃಪ್ರಮಾಣ ಉಳ್ಳ ದಿನದಲ್ಲಿ 26½ ಘಳಿಗೆ ಕಳದ ಮೇಲೆ ಸೂರ್ಯಾಸ್ತಕ್ಕೆ ಮುಂಚೆ]ಮಾಡಬೇಕು. ಸೌರನಕ್ತವನ್ನು ಸಹಾ ಹೀಗೆಯೇ ಸಾಯಾಹ್ನ ವ್ಯಾಪ್ತಿಯುಳ್ಳ ತಿಥಿಯಲ್ಲಿ ಹಗಲಿನಲ್ಲೇ ಮಾಡಬೇಕು. ಪ್ರದೋಷಕಾಲ ವ್ಯಾಪ್ತಿಯು ಎರಡು ದಿನಗಳಲ್ಲಿಯೂ ಇದ್ದರೆ ಪರದಿನವನ್ನು ಗ್ರಹಿಸಬೇಕು. ಎರಡು ದಿನಗಳಲ್ಲಿಯೂ ಪ್ರದೋಷಕಾಲವ್ಯಾಪ್ತಿಯು ಇಲ್ಲದಿದ್ದರೆ ಪರದಿನದಲ್ಲಿಯೇ ಸಾಯಾಹ್ನದಲ್ಲಿ ಹಗಲಿನ ಎಂಟನೆಯ ಭಾಗದಲ್ಲಿ ನಕ್ತವನ್ನು ಮಾಡಬೇಕೇ ಹೊರತು ರಾತ್ರಿಯಲ್ಲಾಗದು. ಎರಡು ದಿನಗಳಲ್ಲಿಯೂ, ಸಮವಾಗಿ ಪ್ರದೋಷಕಾಲದ ಏಕದೇಶದಲ್ಲಿ ವ್ಯಾಪ್ತಿ ಇದ್ದರೆ, ಪರದಿನದಲ್ಲಿಯೇ ಮಾಡಬೇಕು. ವಿಷಮವಾಗಿ ಪ್ರದೋಷದ ಒಂದು ಭಾಗದಲ್ಲಿ ವ್ಯಾಪನೆ ಇದ್ದರೆ, ಹೆಚ್ಚು ವ್ಯಾಪನೆಯುಳ್ಳ ಪೂರ್ವ ದಿನವನ್ನಾದರೂ ಪರಿಗ್ರಹಿಸಬಹುದು. ಆದರೆ ಆ ಹೆಚ್ಚು ವ್ಯಾಪನೆಯು ಪೂಜೆ ಮತ್ತು ಭೋಜನಗಳಿಗೆ ಸಾಕಾಗುವಷ್ಟೇ ದೊರತರೆ ಆಗಬಹುದು. ಇಲ್ಲ

ವಾದರೆ ಎರಡು ದಿನಗಳಲ್ಲಿಯೂ ಸಮವಾಗಿ ವ್ಯಾಪ್ತಿಯು ಇದ್ದರೆ ಹೇಗೋ ಹಾಗೆ ಪರದಿನವನ್ನೇ ಗ್ರಹಿಸಬೇಕೇ ಹೊರತು 'ಹೆಚ್ಚಾಗಿದೆ' ಎಂದು ಪೂರ್ವದಿನವನ್ನು ಗ್ರಹಿಸಬಾರದು. ನಕ್ತವ್ರತ ನಿಮಿತ್ತವಾದ ಭೋಜನವು ವಿಧಿವಿಹಿತವಾದುದರಿಂದ ಭಾನುವಾರ, ಸಂಕ್ರಾಂತಿ, ಇವೇ ಮೊದಲಾದವುಗಳಲ್ಲಿಯೂ ರಾತ್ರಿಯಲ್ಲಿಯೇ ಮಾಡತಕ್ಕದ್ದಾಗಿದೆ. ಭಾನುವಾರವೇ ಮೊದಲಾದವುಗಳಲ್ಲಿ ರಾತ್ರಿಭೋಜನ ನಿಷೇಧವು. ಊಟದ ಆಶೆಯಿಂದ ಮಾಡುವ ಭೋಜನಪರವು. ಉಪವಾಸಕ್ಕೆ ಪ್ರತಿನಿಧಿಯಾಗಿ ಮಾಡುವ ನಕ್ತವನ್ನು, ಯಾವ ದಿವಸದಲ್ಲಿ ಉಪವಾಸವನ್ನು ಮಾಡಬೇಕೆಂದು ನಿರ್ಣಯವಾಗಿರುತ್ತೊ ಆ ದಿನದಲ್ಲಿಯೇ ಮಾಡಬೇಕು. ಅಯಾಚಿತವು ಅಹೋರಾತ್ರ ಸಾಧ್ಯವಾದುದರಿಂದ ಉಪವಾಸದಂತೆ ಅದರ ನಿರ್ಣಯವು. ಪೈತೃಕ ಕರ್ಮಗಳಿಗೆ ಅಪರಾಹ್ಣಾದಿ ವ್ಯಾಪ್ತಿಯಿಂದ ನಿರ್ಣಯವು. ಆ ವಿಚಾರವು ಆಯಾಯ ಪ್ರಕರಣಗಳಲ್ಲಿ ಹೇಳಲ್ಪಡುತ್ತೆ. ಹಿಂದಿನ ತಿಥಿಯಲ್ಲಿ ಆಚರಿಸಿದ ಏಕಭಕ್ತ, ನಕ್ತ, ಆಯಾಚಿತ, ಉಪವಾಸ, ಇವುಗಳಿಗೆ ಮಾರನೆಯ ದಿನದಲ್ಲಿ ಆ ತಿಥಿಯು ಕಳೆದ ಮೇಲೆ ಪಾರಣೆ ಮಾಡಬೇಕು. ತಿಥಿಯು ಮೂರು ಯಾಮಗಳ ಮೇಲೂ ಇರುವದಾದರೆ, ಪಾರಣೆಯು ಪ್ರಾತಃಕಾಲದಲ್ಲಿಯೇ ಎಂದು ಎಲ್ಲಾ ಕಡೆಯಲ್ಲಿಯೂ ತಿಳಿಯತಕ್ಕದ್ದು, ಎಂದು ಮಾಧವಾಚಾರ್ಯರ ಮತವು.

ಇಲ್ಲಿಗೆ ಏಕಭಕ್ತಾದಿ ನಿರ್ಣಯವೆಂಬ ಐದನೆಯ ಉದ್ದೇಶವು ಮುಗಿದುದು.

---

[ ೬ ]

## ವ್ರತವಿಷಯದಲ್ಲಿ ತಿಳಿಯಬೇಕಾದ ಸಾಮಾನ್ಯ ವಿಚಾರ

ಇಲ್ಲಿ ಹೆಂಗಸರಿಗೂ ಶೂದ್ರರಿಗೂ ಸಹ ಎರಡು ದಿವಸಗಳಿಗಿಂತ ಹೆಚ್ಚಾಗಿ ಉಪವಾಸ ಮಾಡುವದಕ್ಕೆ ಅಧಿಕಾರವಿಲ್ಲ. ಸ್ತ್ರೀಯರಿಗಂತೂ ಗಂಡನ ಅನುಜ್ಞೆಯು ಇಲ್ಲದಿದ್ದರೆ ವ್ರತಕ್ಕೂ, ಉಪವಾಸಕ್ಕೂ ಅಧಿಕಾರವಿಲ್ಲ. ಉಪವಾಸ ದಿನದಲ್ಲಿಯೂ, ಶ್ರಾದ್ಧ ದಿನದಲ್ಲಿಯೂ ದಂತಕಾಷ್ಠದಿಂದ ಹಲ್ಲುಗಳನ್ನು ಉಜ್ಜಬಾರದು. ಎಲೆಗಳಿಂದಾಗಲೀ, ಹನ್ನೆರಡು ಸಾರಿ

ಬಾಯಿ ಮುಕ್ಕಳಿಸಿ ಉಗುಳುವದರಿಂದಾಗಲೀ ಶುದ್ಧಿಮಾಡಿಕೊಳ್ಳಬೇಕು. ನೀರು ತುಂಬಿದ ತಾಮ್ರದ ಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಂಡು ಉತ್ತರಾಭಿಮುಖನಾಗಿ ಪ್ರಾತಃಕಾಲದಲ್ಲಿ ಉಪವಾಸಾದಿಗಳನ್ನು ಸಂಕಲ್ಪಿಸಬೇಕು; ಹೊಸದಾಗಿ ವ್ರತಾರಂಭವೂ, ವ್ರತೋದ್ಯಾಪನೆಯೂ ಸಹ, ಮಲಮಾಸದಲ್ಲಿಯೂ, ಗುರುವೇ ಮೊದಲಾದವರ ಅಸ್ತದಲ್ಲಿಯೂ, ವೈಧೃತಿ. ವ್ಯತೀಪಾತಾದಿ ದುರ್ಯೋಗಗಳಲ್ಲಿಯೂ, ಭದ್ರಾಕರಣದಲ್ಲಿಯೂ, ಕ್ರೂರವಾರಗಳಲ್ಲಿಯೂ, ನಿಷಿದ್ಧಗಳಾದ ದಶಾದಿ ತಿಥಿಗಳಲ್ಲಿಯೂ ಆಗದು. ಅಲ್ಲದೆ "ಉದಯಸ್ಥಾ ತಿಥಿರ್ಯಾಹಿ ನ ಭವೇದ್ದಿವ ಮಧ್ಯ ಭಾಕ್ || ಸಾಖಂಡಾ ನ ವ್ರತಾನಾಂ ಸ್ಯಾತ್ಪ್ರಾರಂಭಶ್ಯ ಸಮಾಪನಂ ||" "ಯಾವ ತಿಥಿಯು ಉದಯದಲ್ಲಿದ್ದರೂ ಮಧ್ಯಾಹ್ನಕ್ಕೆ ವ್ಯಾಪಿಸಿ ಇರುವದಿಲ್ಲವೋ ಅದು, ಖಂಡತಿಥಿಯು." ಎಂಬ ಸತ್ಯವ್ರತೀವಾಕ್ಯಾನುಸಾರವಾಗಿ ಖಂಡತಿಥಿಯಲ್ಲಿಯೂ ಅಪೂರ್ವ ವ್ರತಾರಂಭ ಪರಿಸಮಾಪ್ತಿಗಳು ನಿಷಿದ್ಧಗಳಾಗಿವೆ. ಸಹನವೂ, (ಸಮಾಧಾನ) ಸತ್ಯಭಾಷಣೆಯೂ, ಕರುಣೆಯೂ, ದಾನವೂ, ಶುಚಿತ್ವವೂ, ಇಂದ್ರಿಯ ನಿಗ್ರಹವೂ, ದೇವತಾಪೂಜೆಯೂ, ಹೋಮವೂ, ಸಂತೋಷವಾಗಿರೋಣವೂ, ಕದಿಯದೆ ಇರೋಣವೂ ಸಹ ಸಕಲ ವ್ರತಗಳಲ್ಲಿಯೂ ಧರ್ಮವಾಗಿವೆ. ಇಲ್ಲಿ ಹೋಮವು ವ್ಯಾಹೃತಿಮಂತ್ರಗಳಿಂದ, ಅದೂ ಕಾಮ್ಯಗಳಾದ ಕೆಲವು ವ್ರತಗಳಲ್ಲಿ ಎಂದು ತಿಳಿಯತಕ್ಕದ್ದು. ಉಪವಾಸವ್ರತವು ಯಾವ ದೇವತಾ ಸಂಬಂಧವಾದದ್ದೋ ಆ ದೇವತಾ ಸಂಬಂಧವಾದ ಜಪ, ಆ ದೇವತೆಯ ಧ್ಯಾನ, ಆ ದೇವತಾಸಂಬಂಧವಾದ ಕಥೆಗಳನ್ನು ಕೇಳುವದು, ಆ ದೇವತೆಯ ಗುಣಕಥನ ಇವೇ ಮೊದಲಾದವುಗಳನ್ನು ಮಾಡಬೇಕು. ಉಪವಾಸವ್ರತದಲ್ಲಿ ಅನ್ನವನ್ನು ನೋಡುವದು, ವಾಸನೆ ತೆಗೆದುಕೊಳ್ಳುವುದೇ ಮೊದಲಾದದ್ದೂ, ಅಭ್ಯಂಗವೂ, ತಾಂಬೂಲವೂ, ಗಂಧ ಹಚ್ಚಿಕೊಳ್ಳುವದೂ ಸಹಾ ತ್ಯಾಜ್ಯಗಳಾಗಿವೆ. ಸುಮಂಗಲೆಯರು ಸೌಭಾಗ್ಯವ್ರತಗಳಲ್ಲಿ ಅಭ್ಯಂಗ ತಾಂಬೂಲಾದಿಗಳನ್ನು ಬಿಡಬೇಕಾದುದಿಲ್ಲ. "ಅಷ್ಟೈತಾನ್ಯ ವ್ರತಘ್ನಾನಿ ಆಪೋಮೂಲಂ ಫಲಂ ಪಯಃ || ಹವಿರ್ಬ್ರಾಹ್ಮಣ ಕಾಮ್ಯಾ ಚ ಗುರೋರ್ವಚನಮೌಷಧಂ || ಅಂದರೆ ಉದಕವೂ, ಗೆಡ್ಡೆಗೆಣಸುಗಳೂ, ಹಣ್ಣುಗಳೂ, ಹಾಲೂ, ಹವಿಸ್ಸೂ, ಬ್ರಾಹ್ಮಣನ ಕೋರಿ

ಕೆಯೂ, ಗುರುವಾಕ್ಯವೂ, ಔಷಧವೂ ಹೀಗೆ ಈ ಎಂಟೂ ವ್ರತಕ್ಕೆ ಭಂಗವನ್ನುಂಟು ಮಾಡತಕ್ಕವುಗಳಲ್ಲ. ಪ್ರಮಾದಾದಿಗಳಿಂದ ವ್ರತವು ಭಂಗವಾದರೆ ಮೂರು ದಿವಸಗಳು ಉಪವಾಸವಿದ್ದು, ಕ್ಷೌರವನ್ನು ಮಾಡಿಸಿಕೊಂಡು ಪುನಃ ವ್ರತವನ್ನು ಮಾಡಬೇಕು. ಅಶಕ್ತನಾದವನು ಒಬ್ಬ ಬ್ರಾಹ್ಮಣನಿಗೆ ಭೋಜನ ಮಾಡಿಸುವುದನ್ನಾಗಲೀ ಅಥವಾ ಅದಕ್ಕೆ ಸಾಕಾಗುವಷ್ಟು ದ್ರವ್ಯವೇ ಮೊದಲಾದವುಗಳ ದಾನವನ್ನಾಗಲೀ, ಸಹಸ್ರಗಾಯತ್ರೀಮಂತ್ರ ಜಪವನ್ನಾಗಲೀ, ಹನ್ನೆರಡು ಪ್ರಾಣಾಯಾಮಗಳನ್ನಾಗಲೀ ಮಾಡಬೇಕು. (ತಾನು) ಅಂಗೀಕರಿಸಿದ ವ್ರತವನ್ನು ಮಾಡಲು ಅಶಕ್ತನಾದವನು ಪ್ರತಿನಿಧಿಯಿಂದ ಮಾಡಿಸಬಹುದು. ಆ ಪ್ರತಿನಿಧಿಗಳಾಗತಕ್ಕವರು ಮಗ, ಹೆಂಡತಿ, ಗಂಡ, ಸಹೋದರ, ಪುರೋಹಿತ, ಸ್ನೇಹಿತರಲ್ಲಿ ಯಾರಾದರೊಬ್ಬರಾಗಿರಬೇಕು. ಮಗನೇ ಮೊದಲಾದವರು ತಂದೆಯೇ ಮೊದಲಾದವರಿಗಾಗಿ ವ್ರತವನ್ನು ಮಾಡುವಾಗ ತಾವೂ ವ್ರತಫಲವನ್ನು ಪಡೆಯುತ್ತಾರೆ.

"ಅಸಕೃಜ್ಜಲ ಪಾನಾಚ್ಚ ಸಕೃತ್ತಾಂಬೂಲ ಚರ್ವಣಾತ್ ||
ಉಪವಾಸಃ ಪ್ರಣಶ್ಯೇತದಿವಾಸ್ವಾಪಾಚ್ಚ ಮೈಥುನಾತ್ ||"

ಅನೇಕ ಸಾರಿ ನೀರು ಕುಡಿಯುವದರಿಂದಲೂ, ತಾಂಬೂಲವನ್ನು ಒಂದೇಒಂದು ಸಾರಿ ಹಾಕಿಕೊಂಡರೂ, ಹಗಲು ನಿದ್ರೆಮಾಡುವದರಿಂದಲೂ, ಮೈಥುನದಿಂದಲೂ ಉಪವಾಸವ್ರತವು ಕೆಟ್ಟು ಹೋಗುವದು. ಸಂಭೋಗವನ್ನು ಸ್ಮರಿಸಿಕೊಳ್ಳುವದೂ, ಸಂಭೋಗ ವಿಚಾರವನ್ನು ಬಾಯಲ್ಲಿ ಹೇಳುವದೂ, ಸ್ತ್ರೀಯರಜೊತೆಯಲ್ಲಿ ಆಟವಾಡುವದೂ, ನೋಡುವದೂ, ಗುಟ್ಟಾಗಿ ಮಾತಾಡುವದೂ, ಸಂಭೋಗ ಮಾಡಬೇಕೆಂದು ಮನಸ್ಸಿನಲ್ಲಿ ಸಂಕಲ್ಪಮಾಡುವದೂ, ನಿಶ್ಚಯಿಸುವದೂ, ಆಚರಿಸುವದೂ ಎಂದು ಮೈಥುನವು ಎಂಟು ಪ್ರಕಾರವಾಗಿರುತ್ತೆ. ಪ್ರಾಣಸಂಕಟಗಳಲ್ಲಿ ನೀರನ್ನು ಅನೇಕ ಸಾರಿ ಕುಡಿಯುವದರಲ್ಲಿ ದೋಷವಿಲ್ಲ. ಚರ್ಮದಲ್ಲಿರುವ ನೀರು, ಅಕಳಿಗೆ ಭಿನ್ನವಾದ (ಎಮ್ಮೆಯೇ ಮೊದಲಾದವುಗಳ) ಹಾಲು, ಕಿರುಗಡಲೆ, ನಿಂಬೇಹಣ್ಣು, ಚಿಪ್ಪಿನಸುಣ್ಣ ಎಂಬಿವು ಮಾಂಸಗಣವಾಗಿವೆ. ಇವುಗಳನ್ನು ವ್ರತದಲ್ಲಿ ತ್ಯಜಿಸಬೇಕು. ಕಣ್ಣುನೀರು ಹಾಕುವದರಿಂದಲೂ, ಸಿಟ್ಟು ಮಾಡುವದರಿಂದಲೂ ವ್ರತವು ತತ್ಕ್ಷಣವೇ ನಾಶವಾಗುವದು. ಪರಾನ್ನ ಭೋಜನ

ಮಾಡಿದರೆ ಅನ್ನವು ಯಾರದೋ ಫಲವೂ ಅವರಿಗೇ ಸೇರುವದು. ಎಳ್ಳು, ಹೆಸರು ಇವುಹೊರತು ಕಡಲೆಯೇ ಮೊದಲಾದ ಮುಸುಕಿರುವ ಧಾನ್ಯಗಳನ್ನೂ ಉದ್ದನ್ನೂ, ಮೂಲಂಗಿ ಮೊದಲಾದ ಕ್ಷಾರಗಳುಳ್ಳವನ್ನೂ, ಉಪ್ಪು ಜೇನು ತುಪ್ಪ ಮಾಂಸವೇ ಮೊದಲಾದವುಗಳನ್ನೂ ಬಿಡಬೇಕು.

## ವ್ರತಗಳಲ್ಲಿ ಉಪಯೋಗಿಸಬಹುದಾದ ಹವಿರ್ದ್ರವ್ಯಗಳು.

ಸಜ್ಜೆ, ಮ್ಯಾರೇಭತ್ತ, ಗೋಧಿ ಇವುಗಳು ವ್ರತದಲ್ಲಿ ವಿಹಿತಗಳಾಗಿವೆ. ಭತ್ತ, ಹೆಸರು, ಯವ, ಯಳ್ಳು, ನವಣೆ, ನೆಲಗಡಲೆ, ಇವೇ ಮೊದಲಾದ ಧಾನ್ಯಗಳೂ, ಬಿಳಿಯ ಗೆಣಸು, ಸುವರ್ಣದ ಗೆಡ್ಡೆಯೇ ಮೊದಲಾದ ಕಂದಗಳೂ, ಸೈಂಧ್ರಲವಣ, ಕಲ್ಲುಪ್ಪು ಹಸುವಿನ ಹಾಲು, ಮೊಸರು, ತುಪ್ಪ ಇವುಗಳೂ, ಹಲಸಿನಹಣ್ಣು, ಮಾವಿನಹಣ್ಣು, ತೆಂಗಿನಕಾಯಿ, ಅಳಲೇಕಾಯಿ, ಹಿಪ್ಪಲಿ, ಜೀರಿಗೆ, ಶುಂಠಿ, ಹುಣಸೇಹಣ್ಣು, ಬಾಳೇಹಣ್ಣು ಲವಲೀಫಲ (          )ನೆಲ್ಲೀಕಾಯಿ, ಬೆಲ್ಲ ಹೊರತು ಮಿಕ್ಕ ಕಬ್ಬಿನಲ್ಲಾದ ಪದಾರ್ಥಗಳು [ ಸಕ್ಕರೆಗಳು ] ಎಣ್ಣೆಯಲ್ಲಿ ಬೇಯಿಸದಿರುವ ಪದಾರ್ಥಗಳು [ಅರ್ಥಾತ್ ಘೃತದಕ್ಷ್ಯಗಳು] ಇವುಗಳು ಹವಿರ್ದ್ರವ್ಯಗಳಾಗಿವೆ. ಕೆಲವುಕಡೆ ಆಕಳ ಮಜ್ಜಿಗೆಯೂ, ಎಮ್ಮೆಯ ತುಪ್ಪವೂ ಹವಿರ್ದ್ರವ್ಯಗಳಾಗಿ ಎಣಿಸಲ್ಪಟ್ಟಿವೆ. ವ್ರತವಿಧಿಯನ್ನು ಪ್ರತ್ಯೇಕವಾಗಿ ಹೇಳದಿರುವ ಸ್ಥಳದಲ್ಲಿ ಮಾಷಾ*ದಿ ಪರಿಮಾಣ ಉಳ್ಳ ಚಿನ್ನದ ಅಥವಾ ಬೆಳ್ಳಿಯ ಪ್ರತಿಮೆಯನ್ನು ಪೂಜಿಸಬೇಕು. ಹೋಮಕ್ಕೆ ದ್ರವ್ಯವು ಹೇಳಲ್ಪಡದಿದ್ದರೆ ಆಜ್ಯದಿಂದ ಹೋಮವು. ದೇವತೆಯನ್ನು ಹೇಳದಿರುವಾಗ ಪ್ರಜಾಪತಿ ದೇವತೆಯನ್ನು ಹೇಳಬೇಕು. ಮಂತ್ರವನ್ನು ಹೇಳಿದಿರುವ ಸ್ಥಳಗಳಲ್ಲಿ ಸಮಸ್ತವ್ಯಾಹೃತಿಗಳಿಂದ ಹೋಮ ಮಾಡಬೇಕು. ಸಂಖ್ಯೆಯನ್ನು ಹೇಳದಿದ್ದರೆ, ನೂರೆಂಟಾಗಲೀ ಇಪ್ಪತ್ತೆಂಟಾಗಲೀ ಎಂಟಾಗಲೀ ಹೋಮದ ಸಂಖ್ಯೆಯಾಗಿರುತ್ತೆ. ಉಪವಾಸವನ್ನು ಮಾಡಿದ ಮೇಲೆ ಅದನ್ನು ಪೂರ್ತಿಗೊಳಿಸುವದಕ್ಕಾಗಿ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು. ಉದ್ಯಾಪನೆಯನ್ನು ಹೇಳದೇ ಇರುವಾಗ ಗೋವಸ್ತ್ರಾಗಲೀ ಹಿರಣ್ಯವಸ್ತ್ರಾಗಲೀ

* ಅರು ಗುಂಜಿಯ ತೂಕಕ್ಕೆ ಮಾಷವೆಂದು ಹೆಸರು.

ದಾನ ಮಾಡಬೇಕು. ಸಾಂಗವಾಯಿತೆಂದು ಬ್ರಾಹ್ಮಣರು ಹೇಳಿದರೆ, ವ್ರತವು ಸಾಂಗವಾಗುವದು. ದಕ್ಷಿಣೆಯನ್ನು ಕೊಟ್ಟು ಅನಂತರದಲ್ಲಿ ಬ್ರಾಹ್ಮಣರ ಅನುಗ್ರಹವನ್ನು ಪಡೆಯಬೇಕು. ಇದು ಎಲ್ಲಾ ಕಡೆಯಲ್ಲಿ ಯೂ ಅನ್ವಯಿಸತಕ್ಕದ್ದಾಗಿದೆ ಹಿಡಿದ ವ್ರತವನ್ನು ಬಿಡುವದರಲ್ಲಿ ಚಂಡಾ ಲಸಮಾನತ್ವವು. ವ್ರತವೇ ಮೊದಲಾದವುಗಳಲ್ಲಿ ವಿಧವೆಯರು ನಾನಾ ಬಣ್ಣದ ಅಥವಾ ಕೆಂಪೇಮೊದಲಾದ ಬಣ್ಣದ ಬಟ್ಟೆಗಳನ್ನು ಧರಿಸಬಾರದು. ಬಿಳೀ ಬಟ್ಟೆಯನ್ನೇ ಉಡಬೇಕು.

## ವ್ರತಾದಿಗಳಲ್ಲಿ ಸೂತಕಾದಿಗಳು ಬಂದರೆ ನಿರ್ಣಯ.

ಹಿಡಿದ ವ್ರತಾದಿಗಳಲ್ಲಿ ಸೂತಕಾದಿಗಳು ಬಂದರೂ ಸ್ತ್ರೀಯರಾಗಿದ್ದರೆ ರಜಸ್ವಲೆಯರಾಗಿದ್ದರೂ, ಜ್ವರವೇ ಮೊದಲಾದ ರೋಗಗಳು ಬಂದಿದ್ದರೂ, ಶರೀರಸಂಬಂಧಗಳಾದ ನಿಯಮಗಳನ್ನೆಲ್ಲ ತಾನೇ ಮಾಡಬೇಕು. ಪೂಜೆಯೇ ಮೊದಲಾದವುಗಳನ್ನು ಮಾತ್ರ ಇತರರ ಮೂಲಕ ಮಾಡಿಸಬೇಕು. ಹೊಸ ದಾಗಿ ವ್ರತಾರಂಭವು ಮಾತ್ರ ಸೂತಕಾದಿಗಳಲ್ಲಿ ಕೂಡದು.

"ಕಾಮ್ಯೇ ಪ್ರತಿನಿಧಿರ್ನಾಸ್ತಿ ನಿತ್ಯೇ ನೈಮಿತ್ತಿಕೇಚಸಃ ||
ಕಾಮ್ಯೇಪ್ಯುಪಕ್ರಮಾದೂರ್ಧ್ವಂ ಕೇಚಿತ್ ಪ್ರತಿನಿಧಿಂ ವಿದುಃ || "

ಕಾಮ್ಯಕರ್ಮಗಳಿಗೆ ಪ್ರತಿನಿಧಿಯು ಇಲ್ಲ. ಅದು ನಿತ್ಯನೈಮಿತ್ತಿಕಗಳಿಗೇ ಸರಿ. ಕಾರ್ಯೋಪಕ್ರಮಾನಂತರದಲ್ಲಿ ಸೂತಕಾದಿಗಳು ಬಂದರೆ ಆಗ ಕಾಮ್ಯ ಕರ್ಮಗಳಲ್ಲಿಯೂ ಪ್ರತಿನಿಧಿಯು ಉಂಟೆಂದು ಕೆಲವರು ಹೇಳುತ್ತಾರೆ.

ನಸ್ಯಾತ್ಪ್ರತಿನಿಧಿರ್ಮಂತ್ರಸ್ವಾಮಿ ದೇವಾಗ್ನಿ ಕರ್ಮಸು ||
ನಾಪಿಪ್ರತಿನಿಧಾತವ್ಯಂ ನಿಷಿದ್ಧಂ ವಸ್ತು ಕುತ್ರಚಿತ್ ||

ಮಂತ್ರಕ್ಕೂ, ಗಂಡನಿಗೂ, ದೇವತೆಗೂ, ಅಗ್ನಿಗೂ, ಕರ್ಮಕ್ಕೂ ಪ್ರತಿ ನಿಧಿಯು ಇಲ್ಲ. ನಿಷಿದ್ಧವಾದ ವಸ್ತುವನ್ನು ಯಾವಾಗಲಾದರೂ ಪ್ರತಿ ನಿಧಿಯಾಗಿ ಉಪಯೋಗಿಸಬಾರದು.

ಉಪವಾಸ, ಪಾರಣೆ, ಏಕಭಕ್ತಾದಿಗಳು ಒಂದೇ ದಿನದಲ್ಲಿ ಬಂದೊ ದಗಿದರೆ ನಿರ್ಣಯ:—

ವ್ರತವೇ ಮೊದಲಾದವುಗಳು ಒಂದು ದಿವಸದಲ್ಲಿಯೇ ಒಟ್ಟಿಗೆ ಬಂ ದೊದಗಿದರೆ, ಒಂದಕ್ಕೊಂದು ವಿರೋಧವಿಲ್ಲದ ದಾನ ಹೋಮಾದಿಗಳನ್ನು

ಕ್ರಮವಾಗಿ ನಡಿಸಬೇಕು.

ಪರಸ್ಪರ ವಿರುದ್ಧಗಳಾದ ನಕ್ತಭೋಜನವೂ, ಉಪವಾಸವೇ ಮೊದಲಾದವುಗಳೂ ಬಂದೊದಗಿದರೆ ಅದರಲ್ಲಿ ಒಂದನ್ನು ತಾನೇ ಮಾಡಿ ಉಳಿದವುಗಳನ್ನು ಹೆಂಡತಿ, ಮಗ ಇವರ ಮೂಲಕ ಮಾಡಿಸಬೇಕು. ಚತುರ್ದಶಿ, ಅಷ್ಟಮಿಯೇ ಮೊದಲಾದವುಗಳಲ್ಲಿ ಹಗಲು ಭೋಜನ ನಿಷೇಧವೂ, ಬೇರೊಂದು ವ್ರತದ ಪಾರಣೆಯೂ ಸಹಾ ಏಕದಾ ಪ್ರಾಪ್ತವಾದರೆ, ಚತುರ್ದಶಿಯೇ ಮೊದಲಾದವುಗಳಲ್ಲಿ ದಿವಾ ಭೋಜನವು ನಿಷೇಧವು. ಆಶೆಯಿಂದ ಮಾಡುವ ಭೋಜನ ಪರವಾದ್ದರಿಂದಲೂ, ಪಾರಣೆಯು ವಿಧಿಪ್ರಾಪ್ತವಾದುದರಿಂದಲೂ ಆ ದಿನ ಊಟವನ್ನೇ ಮಾಡಬೇಕು. ಹೀಗೆಯೇ ಭಾನುವಾರವೇ ಮೊದಲಾದವುಗಳಲ್ಲಿ ಸಂಕಷ್ಟಚತುರ್ಥಿಯೇ ಮೊದಲಾದ ವ್ರತವು ಬಂದಲ್ಲಿ ಆ ರಾತ್ರಿಯಲ್ಲಿ ಊಟವನ್ನೇ ಮಾಡಬೇಕು. ಅಷ್ಟಮಿಯೇ ಮೊದಲಾದವುಗಳಿಂದ ಹಗಲು ಭೋಜನ ನಿಷೇಧವೂ ಭಾನುವಾರಾದಿ ನಿಮಿತ್ತದಿಂದ ರಾತ್ರಿ ಭೋಜನ ನಿಷೇಧವೂ ಒದಗಿದರೆ, ಆ ದಿನ ಉಪವಾಸ ಮಾಡಬೇಕೆಂದು ಅರ್ಥವಾಗುವದು. ಪುತ್ರವಂತನಾದ ಗೃಹಸ್ಥನಿಗೆ ಸಂಕ್ರಮಣ ನಿಮಿತ್ತವಾದ ಉಪವಾಸ ನಿಷೇಧವೂ, ಅಷ್ಟಮ್ಯಾದಿ ನಿಮಿತ್ತಕವಾದ ಭೋಜನ ನಿಷೇಧವೂ ಯಾವತ್ಕಾದರೂ ಒದಗಿದರೆ, ಆ ದಿನ ಏನಾದರೂ ಸ್ವಲ್ಪ ಉಪಹಾರಮಾಡಿ ಉಪವಾಸವನ್ನೇ ಮಾಡಬೇಕು. ಚಾಂದ್ರಾಯಣವ್ರತದ ಮಧ್ಯದಲ್ಲಿ ಏಕಾದಶಿಯೇ ಮೊದಲಾದವುಗಳು ಬಂದರೆ ಆಗ ವ್ರತೋಕ್ತಗ್ರಾಸ ಸಂಖ್ಯಾನಿಯಮಾನುಸಾರ ಊಟವನ್ನೇ ಮಾಡಬೇಕು; ಅಂದರೆ ಆ ದಿವಸದಲ್ಲಿ ಎಷ್ಟು ತುತ್ತುಗಳನ್ನು ತೆಗೆದುಕೊಳ್ಳಬೇಕಾಗಿರುತ್ತೋ, ಅಷ್ಟು ತುತ್ತುಗಳನ್ನು ಮಾತ್ರ ತೆಗೆದುಕೊಳ್ಳಲೇಬೇಕು. ಕೃಛ್ರಾದಿ ವ್ರತಗಳಲ್ಲಿಯೂ ಹೀಗೆಯೇ ನಡಿಸಬೇಕೆಂದು ತಿಳಿಯುವದು. ಇದರಂತೆಯೇ ಒಂದು ದಿವಸ ಉಪವಾಸ ಮಾರನೆಯ ದಿವಸ ಪಾರಣೆ ಎಂಬ ಕ್ರಮದಲ್ಲಿ [ಧಾರಣೆ ಪಾರಣೆ] ಏಕಾದಶಿಯ ದಿವಸ ಪಾರಣೆ ಮಾಡಬೇಕಾಗಿ ಬಂದಲ್ಲಿ ಪಾರಣೆಯ ಕೆಲಸವನ್ನು ಜಲದಿಂದ ಮುಗಿಸಿ, ಉಪವಾಸವನ್ನೇ ಮಾಡಬೇಕು. ಹೀಗೆಯೇ ದ್ವಾದಶಿಯಲ್ಲಿ ಮಾಸೋಪವಾಸ, ಶ್ರಾದ್ಧ, ಪ್ರದೋಷ ಇತ್ಯಾದಿ ಕಾರಣಗಳಿಂದ ಪಾರಣೆಗೆ ಪ್ರತಿಬಂಧಕವು ಬಂದರೆ ಆಗ ಉದಕದಿಂದ ಪಾರಣೆಯನ್ನು ಮಾಡ

ಬೇಕು. ಏಕಾದಶಿಯೇ ಮೊದಲಾದವುಗಳಲ್ಲಿ ಸಂಕ್ರಮಣವು ಬಂದಾಗ ಪುತ್ರವಂತನಾದ ಗೃಹಸ್ಥನಿಗೆ ಸಂಕ್ರಮಣನಿಮಿತ್ತಕವಾದ ಉಪವಾಸನಿಷೇಧವೂ ಏಕಾದಶಿನಿಮಿತ್ತಕವಾದ ಉಪವಾಸವೂ ಒಂದೊದಗುವವು. ಆಗ ನೀರನ್ನಾಗಲಿ, ಗೆಡ್ಡೆ-ಗೆಣಸುಗಳನ್ನಾಗಲಿ ಹಣ್ಣುಗಳನ್ನಾಗಲಿ, ಹಾಲನ್ನಾಗಲಿ, ಆಹಾರವಾಗಿ ಮಾಡಿಕೊಳ್ಳಬೇಕು. ಎರಡು ಉಪವಾಸಗಳಾಗಲೀ, ಎರಡು ನಕ್ತಗಳಾಗಲೀ ಎರಡು ಏಕಭಕ್ತಗಳಾಗಲೀ ಒಂದೇ ದಿನದಲ್ಲಿಯೇ ಬಂದರೆ, ಆಗ "ಅಮುಕೋಪವಾಸಂ ಅಮುಕೋಪವಾಸಂಚೋಭಯಂ ತಂತ್ರೇಣ ಕರಿಷ್ಯೆ'' ಈ (ವ್ರತ) ಸಂಬಂಧವಾದ ಉಪವಾಸ ಈ (ವ್ರತ) ಸಂಬಂಧವಾದ ಉಪವಾಸ ಇವೆರಡನ್ನು ಒಟ್ಟಾಗಿಯೇ ಸೇರಿಸಿ, ಮಾಡುತ್ತೇನೆಂದು ಸಂಕಲ್ಪ ಮಾಡಿ ಉಪವಾಸ-ಪೂಜಾ-ಹೋಮಾದಿಗಳನ್ನು ಒಟ್ಟಿಗೆಯೇ ಆಚರಿಸಬೇಕು. ಎಂದಾದರೂ ಉಪವಾಸ ಮತ್ತು ಏಕಭಕ್ತಗಳು ಒಂದೇದಿವಸದಲ್ಲಿಯೇ ಬಂದರೆ, ಆ ದಿವಸದಲ್ಲಿ ತಿಥಿಗಳು ಎರಡು ಇರುವ ಪಕ್ಷದಲ್ಲಿ ಗೌಣಕಾಲವ್ಯಾಪ್ತಿಯನ್ನು ಆಶ್ರಯಿಸಿ ಒಂದನ್ನು ಹಿಂದಿನ ತಿಥಿಯಲ್ಲಿಯೂ, ಎರಡನೆಯದನ್ನು ಮುಕ್ಕ ತಿಥಿಯಲ್ಲಿಯೂ ಆಚರಿಸಬೇಕು. ತಿಥಿಯು ಅಖಂಡವಾಗಿದ್ದರೆ, ತಾನು ಒಂದನ್ನು ಮಾಡಿ, ಮತ್ತೊಂದನ್ನು ಮಗನೇ ಮೊದಲಾದವರಿಂದ ಮಾಡಿಸಬೇಕೆಂದು ಹೇಳಿದೆ. ಹೀಗೆಯೇ 'ಕಾಮ್ಯಂ ನಿತ್ಯಸ್ಯ ಬಾಧಕಂ' ಕಾಮ್ಯವು ನಿತ್ಯಕ್ಕೆ ಬಾಧಕವಾಗಿರುತ್ತೆ, ಎಂಬಿವೇ ಮೊದಲಾದ ವಾಕ್ಯಗಳು ಇರುವದರಿಂದ ಕಾಮ್ಯನಿತ್ಯಾದಿಗಳ ಬಲಾ-ಬಲಗಳನ್ನೂ, ಸಾಧಕ-ಬಾಧಕಗಳನ್ನೂ, ಸಂಭವಾಸಂಭವಗಳನ್ನೂ ವಿಚಾರ ಮಾಡಿ ಹೇಗೆ ಮಾಡಬೇಕೆಂಬುವದನ್ನು ವಿಚಾರಮಾಡಿ ಊಹಿಸಿ ತಿಳಿದುಕೊಳ್ಳಬೇಕು.

ಇಲ್ಲಿಗೆ ಸಾಮಾನ್ಯಪ್ರತಪರಿಭಾಷೆ ಎಂಬ ಎರಡನೆಯ ಉದ್ದೇಶವು ಮುಗಿದುದು.

# [ ೯ ]
# ಪಾಡ್ಯವೇ ಮೊದಲಾದ ತಿಥಿಗಳ ನಿರ್ಣಯ. ಅದರಲ್ಲಿ ಪಾಡ್ಯದ ನಿರ್ಣಯ.

ಶುಕ್ಲಪಕ್ಷದ ಪಾಡ್ಯವು ಅಪರಾಹ್ಣವ್ಯಾಪ್ತಿ ಇದ್ದಲ್ಲಿ ಪೂಜಾವ್ರತಾದಿಗಳ ವಿಷಯದಲ್ಲಿ ಅಮಾವಾಸ್ಯಾ ವೇಧೆಯುಳ್ಳದ್ದನ್ನೇ ಗ್ರಹಿಸಬೇಕು. ಸಾಯಾಹ್ನವ್ಯಾಪ್ತಿಯಿದ್ದರೂ ಪೂರ್ವವಿದ್ಧವನ್ನೇ ಗ್ರಹಿಸಬೇಕೆಂದು ಮಾಧವಾಚಾರ್ಯರ ಮತವು. ಹಾಗಿಲ್ಲದಿದ್ದರೆ ದ್ವಿತೀಯಾ ಯುಕ್ತವಾದದ್ದನ್ನೇ ಪರಿಗ್ರಹಿಸಬೇಕು. ಬಹುಳ ಪಾಡ್ಯವನ್ನೆಲ್ಲಾ ದ್ವಿತೀಯಾ ಯುಕ್ತವಾದದ್ದನ್ನೇ ಗ್ರಹಿಸಬೇಕು. ಉಪವಾಸ ವಿಷಯದಲ್ಲಾದರೆ ಎರಡು ಪಕ್ಷಗಳ ಪ್ರತಿಪತ್ತುಗಳನ್ನು ಪೂರ್ವ ವಿದ್ಧವಾದದ್ದನ್ನೇ ಪರಿಗ್ರಹಿಸಬೇಕು. ಅಪರಾಹ್ಣ ವ್ಯಾಪಿನಿಯಾದ ಪಾಡ್ಯದಲ್ಲಿ ಆಚರಿಸಬೇಕಾದ ಉಪವಾಸಾದಿಗಳಿಗೆ ಪ್ರಾತಃಕಾಲದಲ್ಲಿಯೇ ಸಂಕಲ್ಪ ಮಾಡಬೇಕಷ್ಟೇ? ಸಂಕಲ್ಪಕಾಲದಲ್ಲಿ ಪಾಡ್ಯವೇ ಮೊದಲಾದ ತಿಥಿಯು ಇಲ್ಲದಿದ್ದರೂ ಪಾಡ್ಯವೇ ಮೊದಲಾದವುಗಳನ್ನು ಹೇಳಬೇಕೇ ಹೊರತು ಅಮಾವಾಸ್ಯಾದಿಗಳನ್ನು ಹೇಳಕೂಡದು. ಹೀಗೆಯೇ "ಉಪೋಷ್ಯಾದ್ವಾದಶೀ ಶುದ್ಧಾ" 'ಶುದ್ಧವಾದ ದ್ವಾದಶಿಯಲ್ಲಿಯೇ ಉಪವಾಸ ಮಾಡಬೇಕು' ಇತ್ಯಾದಿ ಸ್ಥಳಗಳಲ್ಲಿಯೂ, ಏಕಾದಶೀವ್ರತ ನಿಮಿತ್ತವಾದ ಸಂಕಲ್ಪ, ಪೂಜೆ ಮೊದಲಾದವುಗಳಲ್ಲಿ 'ಏಕಾದಶೀ' ಎಂತ ಹೇಳಬೇಕೇ ಹೊರತು 'ದ್ವಾದಶಿ' ಎಂತ ಹೇಳಕೂಡದು. ಆದರೆ ಸಂಧ್ಯಾವಂದನೆ, ಅಗ್ನಿಹೋತ್ರ ಇತ್ಯಾದಿ ಕರ್ಮಗಳಲ್ಲಿ ಆಯಾಯ ಕಾಲದಲ್ಲಿ ವ್ಯಾಪ್ತಿಯುಳ್ಳ ದ್ವಾದಶ್ಯಾದಿ ತಿಥಿಯನ್ನೇ ಹೇಳಬೇಕೆಂದು ನನ್ನ (ಅಂದರೆ ಧರ್ಮಸಿಂಧುಕಾರನ) ಅಭಿಪ್ರಾಯವು. ಸಂಕಲ್ಪ ಮಾಡುವದೂ ಕೂಡ ಸೂರ್ಯೋದಯಕ್ಕೆ ಮುಂಚೆ ಉಷಃಕಾಲದಲ್ಲಿಯಾಗಲೀ, ಸೂರ್ಯೋದಯಾನಂತರ ಪ್ರಾತಃಕಾಲವೆಂಬ ಆರು ಗಳಿಗೆಗಳಲ್ಲಿ ಮೊದಲಿನ ನಾಲ್ಕು ಗಳಿಗೆಗಳೊಳಗಾಗಿಯಾಗಲೀ ಪ್ರಶಸ್ತವಾಗಿರುತ್ತೆ. ಮೂರನೆಯ ಮುಹೂರ್ತವಾದ ಕೊನೆಯ ಎರಡು ಗಳಿಗೆಗಳು ನಿಷಿದ್ಧಗಳಾಗಿವೆ.

ಇಲ್ಲಿಗೆ ಪ್ರತಿಪನ್ನಿರ್ಣಯವೆಂಬ ಏಳನೆಯ ಉದ್ದೇಶವು ಮುಗಿದುದು.

[ ೧೦ ]

## ದ್ವಿತೀಯಾ ನಿರ್ಣಯ.

ಬಿದಿಗೆಯನ್ನು ಶುಕ್ಲಪಕ್ಷದಲ್ಲಿ ತದಿಗೆಯ ವೇಧೆಯುಳ್ಳದ್ದನ್ನು ಗ್ರಹಿಸಬೇಕು. ಕೃಷ್ಣಪಕ್ಷದಲ್ಲಿಯಾದರೆ ಅಹಃಪ್ರಮಾಣವನ್ನು ಎರಡುಭಾಗ ಮಾಡಿ ಪೂರ್ವಾಹ್ಣವೆಂಬ ಮೊದಲನೆಯ ಭಾಗದಲ್ಲಿಯೂ ವ್ಯಾಪ್ತಿಯು ಇದ್ದರೆ ಪಾಡ್ಯದ ವೇಧೆಯುಳ್ಳದ್ದನ್ನೇ ಪರಿಗ್ರಹಿಸಬೇಕು; ಹಾಗಿಲ್ಲದಿದ್ದರೆ. ಕೃಷ್ಣಪಕ್ಷದಲ್ಲಿಯೂ ತದಿಗೇ ವೇಧೆಯುಳ್ಳದ್ದನ್ನೇ ಪರಿಗ್ರಹಿಸಬೇಕು. ಇಲ್ಲಿಗೆ ದ್ವಿತೀಯಾ ನಿರ್ಣಯವೆಂಬ ಎಂಟನೆಯ ಉದ್ದೇಶವು ಮುಗಿದುದು.

---

[ ೧೧ ]

## ತೃತೀಯಾ ನಿರ್ಣಯ.

ರಂಭಾವ್ರತದಲ್ಲಿ ದ್ವಿತೀಯಾವೇಧೆಯುಳ್ಳ ತೃತೀಯೆ(ತದಿಗೆ)ಯನ್ನು ಸ್ವೀಕರಿಸಬೇಕು. ಇತರ ವ್ರತಗಳಲ್ಲಿ ಬಿದಿಗೆಯು ಮೂರು ಮುಹೂರ್ತ (ಆರು ಗಳಿಗೆ) ಇದ್ದು, ಅದರ ಮೇಲೆ ತದಿಗೆಯು ಬಂದಿದ್ದರೆ, ಬಿದಿಗೆಯ ವೇಧೆಯುಳ್ಳ ಆ ದಿನವನ್ನು ಬಿಟ್ಟು ಮಾರನೆಯ ದಿನದಲ್ಲಿ ತದಿಗೆಯು ಆರು ಗಳಿಗೆ ಇದ್ದಲ್ಲಿ ಆ ಪರದಿನವನ್ನೇ ಗ್ರಹಿಸಬೇಕು. ಹಿಂದಿನ ದಿನದಲ್ಲಿ ಬಿದಿಗೆಯು ಆರು ಗಳಿಗೆಗಿಂತ ಕಮ್ಮಿಯಾಗಿದ್ದು, ಪರದಿನದಲ್ಲಿ ತದಿಗೆಯು ಆರು ಗಳಿಗೆ ಇಲ್ಲದೇ ಇದ್ದಲ್ಲಿ ಆಗ ಬಿದಿಗೇ ವೇಧೆಯುಳ್ಳ ಹಿಂದಿನದಿನವನ್ನೇ ಸ್ವೀಕರಿಸಬೇಕು. ಹಿಂದಿನ ದಿನದಲ್ಲಿ ಬಿದಿಗೆಯು ಆರುಗಳಿಗೆ ಇದ್ದು, ಮಾರನೆಯ ದಿನದಲ್ಲಿ ತದಿಗೆಯು ಆರು ಗಳಿಗೆಗಳಿಗಿಂತ ಕಡಿಮೆಯಾಗಿದ್ದರೂ ಮಾರನೆಯ ದಿನವನ್ನೇ ಗ್ರಹಿಸಬೇಕು. ಆದರೆ ಗೌರೀವ್ರತದಲ್ಲಿ ಮಾತ್ರ ಕಲಾಕಾಷ್ಠಾದಿ ಅಲ್ಪಕಾಲದ ಬಿದಿಗೇ ವೇಧೆ ಇದ್ದರೂ ಆ ತದಿಗೆಯನ್ನು ಬಿಟ್ಟು ಪರದಿನದಲ್ಲಿ ತದಿಗೆಯು ಕಲಾಕಾಷ್ಠಾದಿ ಅಲ್ಪಕಾಲವಿದ್ದರೂ ಅದನ್ನು ಪರಿಗ್ರಹಿಸಬೇಕು. ಯಾವತ್ತಾದರೂ ತಿಥಿಯ ಕ್ಷಯದಿಂದ ಪರದಿನದಲ್ಲಿ ಚತುರ್ಥೀಯುಕ್ತವಾದ ತದಿಗೆಯು ಸಿಕ್ಕದೇ ಇದ್ದು, ಪೂರ್ವದಿನದಲ್ಲಿ ದ್ವಿತೀಯಾವೇಧೆಯು ತಪ್ಪದೆಯೂ ಇದ್ದರೆ, ಆಗ ದ್ವಿತೀಯಾವಿದ್ಧವಾದ ತದಿಗೆಯನ್ನೇ ಪರಿಗ್ರಹಿಸಬೇಕು. ತಿಥಿಯ ವೃದ್ಧಿಯಿಂದ ಹಿಂದಿನ ದಿನದಲ್ಲಿ ತದಿಗೆಯು ಆರ

ವತ್ತು ಗಳಿಗೆಯಿದ್ದು ಮಾರನೆಯ ದಿನದಲ್ಲಿ ಒಂದು ಗಳಿಗೆಯೇ ಮೊದಲಾಗಿ ಉಳಿದಿದ್ದರೆ ಆಗ ಹಿಂದಿನದಿನದಲ್ಲಿ ಅರವತ್ತುಗಳಗೆಯುಳ್ಳ ಶುದ್ಧವಾದದ್ದನ್ನು ಬಿಟ್ಟು ಚತುರ್ಥೀಯುಕ್ತವಾದದ್ದನ್ನೇ ಗೌರೀವ್ರತದಲ್ಲಿ ಪರಿಗ್ರಹಿಸಬೇಕು.

ಇಲ್ಲಿಗೆ ತೃತೀಯಾನಿರ್ಣಯವೆಂಬ ಒಂಬತ್ತನೆಯ ಉದ್ದೇಶವು ಮುಗಿದುದು.

---

[ ೧೦ ]

## ಚತುರ್ಥೀ ನಿರ್ಣಯ.

ಗಣಪತಿಯ ವ್ರತವಲ್ಲದ ಇತರ ಉಪವಾಸಕಾರ್ಯಗಳಲ್ಲಿ ಪಂಚಮಿಯುಕ್ತವಾದ ಚತುರ್ಥಿಯನ್ನು (ಚೌತಿ) ಪರಿಗ್ರಹಿಸಬೇಕು. ಗೌರಿ ಮತ್ತು ಗಣಪತಿಯ ವ್ರತಗಳಲ್ಲಿ ಮಧ್ಯಾಹ್ನ ವ್ಯಾಪ್ತಿಯುಳ್ಳ ಚೌತಿಯನ್ನು ಪರಿಗ್ರಹಿಸಬೇಕು. ಮಧ್ಯಾಹ್ನವ್ಯಾಪ್ತಿಯು ಪರದಿನದಲ್ಲಿ ಮಾತ್ರವೇ ಇದ್ದರೆ, ಅದನ್ನೇ ಗ್ರಹಿಸಬೇಕು. ಎರಡು ದಿವಸಗಳಲ್ಲಿಯೂ ಮಧ್ಯಾಹ್ನವ್ಯಾಪ್ತಿಯು ಇದ್ದರೂ, ಇಲ್ಲದಿದ್ದರೂ ಎರಡು ದಿವಸಗಳಲ್ಲಿಯೂ ಸಮವಾಗಿಯಾಗಲೀ, ವಿಷಮವಾಗಿಯಾಗಲೀ ಮಧ್ಯಾಹ್ನದ ಏಕದೇಶದಲ್ಲಿ ವ್ಯಾಪ್ತಿ ಇದ್ದರೂ ಕೂಡ ತೃತೀಯಾ ಯೋಗವು ಮುಖ್ಯವಾದುದರಿಂದ ಹಿಂದಿನ ದಿನವನ್ನೇ ಪರಿಗ್ರಹಿಸಬೇಕು. ನಾಗವ್ರತದಲ್ಲಿಯೋ ಅಂದರೆ ಚೌತಿಯು ಪೂರ್ವ ದಿನದಲ್ಲಿ ಮಾತ್ರವೇ ಮಧ್ಯಾಹ್ನದಲ್ಲಿ ವ್ಯಾಪ್ತಿಯುಳ್ಳದ್ದಾಗಿದ್ದರೆ, ಪೂರ್ವದಿನವನ್ನೇ ಗ್ರಹಿಸಬೇಕು. ಎರಡು ದಿನಗಳಲ್ಲಿಯೂ, ಮಧ್ಯಾಹ್ನವ್ಯಾಪ್ತಿ ಇರೋಣ, ಇಲ್ಲದೇ ಇರೋಣ, ಸಮವಾಗಿಯಾಗಲೀ, ವಿಷಮವಾಗಿಯಾಗಲೀ, ಮಧ್ಯಾಹ್ನದ ಏಕದೇಶದಲ್ಲಿ ವ್ಯಾಪ್ತಿ ಇರೋಣವೆಂಬ ಈ ನಾಲ್ಕು ಪಕ್ಷಗಳಲ್ಲಿಯೂ, ಪಂಚಮೀಯುಕ್ತವಾದದ್ದನ್ನೇ ಪರಿಗ್ರಹಿಸಬೇಕು. ಸಂಕಷ್ಟ ಚತುರ್ಥಿಯಲ್ಲಿ ಮಾತ್ರ ಚಂದ್ರೋದಯಕಾಲಕ್ಕೆ ವ್ಯಾಪ್ತಿಯುಳ್ಳ ಚೌತಿಯನ್ನು ಪರಿಗ್ರಹಿಸಬೇಕು. ಚಂದ್ರೋದಯ ಕಾಲವ್ಯಾಪ್ತಿಯು ಪರದಿನದಲ್ಲಿಯೇ ಇದ್ದರೆ ಅದನ್ನೇ ಪರಿಗ್ರಹಿಸಬೇಕು. ಎರಡು ದಿನಗಳಲ್ಲಿಯೂ ಚಂದ್ರೋದಯ ಕಾಲಕ್ಕೆ ವ್ಯಾಪ್ತಿಯು ಇದ್ದಲ್ಲಿ ತದಿಗಿಯಿಂದ ಕೂಡಿದುದನ್ನೇ ಪರಿಗ್ರಹಿಸಬೇಕು. ಎರಡು ದಿವಸಗಳಲ್ಲಿಯೂ ಚಂದ್ರೋದಯ ವ್ಯಾಪ್ತಿ ಇಲ್ಲದಿದ್ದರೆ ಆಗ ಪರದಿವಸದ ಚೌತಿಯನ್ನೇ ಪರಿಗ್ರಹಿಸಬೇಕು.

ಇಲ್ಲಿಗೆ ಚತುರ್ಥೀನಿರ್ಣಯವೆಂಬ ಹತ್ತನೆಯ ಉದ್ದೇಶವು ಮುಗಿದುದು.

[ ೧೩ ]

## ಪಂಚಮೀ ನಿರ್ಣಯ.

ಕರ್ಮಗಳ ವಿಷಯದಲ್ಲೆಲ್ಲಾ ಪಂಚಮಿಯನ್ನು ಉಭಯಪಕ್ಷಗಳಲ್ಲಿಯೂ ಚತುರ್ಥೀಯು ವೇಧೆಯುಳ್ಳದ್ದನ್ನೇ ಪರಿಗ್ರಹಿಸಬೇಕು; ಆದರೆ ಸ್ಕಂದೋಪವಾಸದಲ್ಲಿಯೂ ನಾಗವ್ರತದಲ್ಲಿಯೂ ಷಷ್ಠೀವಿದ್ಧವಾದ ಪಂಚಮಿಯನ್ನು ಪರಿಗ್ರಹಿಸಬೇಕು. ಪರದಿವಸದಲ್ಲಿ ಪಂಚಮಿಯು ಮೂರು ಮುಹೂರ್ತಕ್ಕಿಂತಲೂ ಕಡಿಮೆಯಾಗಿದ್ದು, ಹಿಂದಿನ ದಿನದಲ್ಲಿ ಮೂರು ಮುಹೂರ್ತಕ್ಕಿಂತಲೂ ಕಡಿಮೆಯಾದ ಚೌತೀವೇಧೆಯು ಇದ್ದರೆ, ಹಿಂದಿನ ದಿವದಲ್ಲಿಯೇ ಆಚರಿಸಬೇಕು. ಚೌತೀವೇಧೆಯು ಮೂರು ಮುಹೂರ್ತಕ್ಕಿಂತಲೂ ಹೆಚ್ಚಾಗಿದ್ದರೆ, ಮಾರನೆಯ ದಿನ ಪಂಚಮಿಯು ಎರಡು ಮುಹೂರ್ತವಿದ್ದರೂ ಪರದಿನವನ್ನೇ ಅಂಗೀಕರಿಸಬೇಕು

ಇಲ್ಲಿಗೆ ಪಂಚಮೀನಿರ್ಣಯವೆಂಬ ಹನ್ನೊಂದನೆಯ ಉದ್ದೇಶವು ಮುಗಿದುದು.

---

[ ೧೪ ]

## ಷಷ್ಠೀ ನಿರ್ಣಯವು.

ಸ್ಕಂದವ್ರತದಲ್ಲಿ ಪೂರ್ವವಿದ್ಧವಾದ ಷಷ್ಠಿಯನ್ನೇ ಪರಿಗ್ರಹಿಸಬೇಕು. ಇತರ ವ್ರತಗಳಲ್ಲಿ ಪರವಿದ್ಧವಾದದ್ದನ್ನೇ ಗ್ರಹಿಸಬೇಕು. ಹಿಂದಿನ ದಿನದಲ್ಲಿ ಪಂಚಮಿಯು ಆರು ಮುಹೂರ್ತಗಳಿಗಿಂತ ಕಡಿಮೆಯಾಗಿದ್ದಲ್ಲಿ ಹಿಂದಿನದಿನದಲ್ಲಿಯಾದರೂ ಆಗಬಹುದು. ಷಷ್ಠಿಯಾಗಲೀ, ಸಪ್ತಮಿಯಾಗಲೀ ಭಾನುವಾರದಲ್ಲಿ ಬಂದರೆ ಅದಕ್ಕೆ ಪದ್ಮಕಯೋಗವೆಂದು ಹೆಸರು.

ಇಲ್ಲಿಗೆ ಷಷ್ಠೀನಿರ್ಣಯವೆಂಬ ಹನ್ನೆರಡನೆಯ ಉದ್ದೇಶವು ಮುಗಿದುದು.

---

[ ೧೫ ]

## ಸಪ್ತಮೀ ನಿರ್ಣಯವು.

ಸಪ್ತಮಿಯು ಕರ್ಮಗಳ ವಿಷಯದಲ್ಲಿ ಮಾತ್ರ ಷಷ್ಠೀಯುಕ್ತವಾದದ್ದೇ ಆಗಬೇಕು. ಯಾವತ್ತಾದರೂ ಪೂರ್ವ ದಿವಸದಲ್ಲಿ ಸೂರ್ಯಾಸ್ತ

ಕಾಲಪರ್ಯಂತವಾಗಿಯೂ ಷಷ್ಠಿಯು ಇದ್ದು, ಹಗಲಿನಲ್ಲಿ ಷಷ್ಠೀಯುಕ್ತವಾದ ಸಪ್ತಮಿಯು ಸಿಕ್ಕದೇ ಹೋಗಿ ಮೂರನೆಯ ದಿವಸ ಅಷ್ಟಮೀ ವೇಧೆಯೂ ಇದ್ದರೆ, ಯತ್ನವಿಲ್ಲದ್ದರಿಂದ ಪರದಿನದಲ್ಲಿ ಅಷ್ಟಮೀ ಯುಕ್ತವಾದ ಸಪ್ತಮಿಯನ್ನೇ ಪರಿಗ್ರಹಿಸಬೇಕು. ಇದರಂತೆಯೇ ಮಿಕ್ಕತಿಥಿಗಳ ನಿರ್ಣಯವನ್ನೂ ಊಹಿಸಿ ತಿಳಿಯತಕ್ಕದ್ದು.

ಇಲ್ಲಿಗೆ ಸಪ್ತಮೀನಿರ್ಣಯವೆಂಬ ಹದಿಮೂರನೆಯ ಉದ್ದೇಶವು ಮುಗಿದುದು.

---

[ ೧೬ ]

## ಅಷ್ಟಮೀ ನಿರ್ಣಯ.

ವ್ರತಗಳ ವಿಷಯದಲ್ಲಿ ಮಾತ್ರ ಶುಕ್ಲಪಕ್ಷದಲ್ಲಿ ನವಮೀಯುತವಾದ ಅಷ್ಟಮಿಯನ್ನು ಪರಿಗ್ರಹಿಸಬೇಕು. ಕೃಷ್ಣಪಕ್ಷದಲ್ಲಿ ಸಪ್ತಮೀಯುತವಾದ ಅಷ್ಟಮಿಯನ್ನು ಪರಿಗ್ರಹಿಸಬೇಕು. ಮಿಳಿತವಾಗಿ ಮಾಡಬೇಕಾದ ಶಿವೋತ್ಸವ ಶಕ್ತ್ಯುತ್ಸವಗಳಲ್ಲಿ ಕೃಷ್ಣಪಕ್ಷದಲ್ಲಿಯಾದರೂ ನವಮೀಯುಕ್ತವಾದದ್ದನ್ನೇ ಪರಿಗ್ರಹಿಸಬೇಕು. ಶುಕ್ಲಪಕ್ಷದಲ್ಲಿ ಪ್ರಾತಃಕಾಲ ಮೊದಲುಗೊಂಡು ಅಪರಾಹ್ಣ ಪೂರ್ತಿಯಾಗುವದರೊಳಗಾಗಿ ಒಂದು ಮುಹೂರ್ತ ಮಾತ್ರವಾದರೂ ಅಷ್ಟಮೀಸಂಬಂಧವು ಉಂಟಾದಲ್ಲಿ ಅದು ಗ್ರಾಹ್ಯವಾದ ಬುಧಾಷ್ಟಮೀಯಾಗಿರುತ್ತೆ. ಸಾಯಾಹ್ನದಲ್ಲಿಯೂ, ಚೈತ್ರಮಾಸದಲ್ಲಿಯೂ ಶ್ರಾವಣವೇ ಮೊದಲಾದ ನಾಲ್ಕುಮಾಸಗಳಲ್ಲಿಯೂ, ಕೃಷ್ಣಪಕ್ಷದಲ್ಲಿಯೂ ಸಹ ಮೇಲೆ ಹೇಳಿದಂತೆ ಬುಧವಾರಕ್ಕೆ ಅಷ್ಟಮೀ ಸಂಬಂಧವು ಉಂಟಾದರೂ ಅದು ಬುಧಾಷ್ಟಮಿಯೆಂದು ಅಂಗೀಕರಿಸಕೂಡದು. ಕೆಲವರು ಪ್ರತಿಯೊಂದು ಕೃಷ್ಣಾಷ್ಟಮಿಯಲ್ಲಿಯೂ, ಕಾಲಭೈರವನ ಉದ್ದೇಶದಿಂದ ಉಪವಾಸ ಮಾಡುತ್ತಾರೆ. ಅದರಲ್ಲಿ ಮಾರ್ಗಶಿರ ಕೃಷ್ಣಾಷ್ಟಮಿಯಲ್ಲಿ ಭೈರವ ಜಯಂತಿಯಾದ ಕಾರಣ ಅದಕ್ಕೆ ಅನುಸಾರವಾಗಿ ನಿರ್ಣಯ ಮಾಡುವದು ಯುಕ್ತವಾದುದರಿಂದ ಈ ಸಂದರ್ಭದಲ್ಲಿ ಮಧ್ಯಾಹ್ನವ್ಯಾಪ್ತಿಯುಳ್ಳ ಅಷ್ಟಮಿಯನ್ನು ಪರಿಗ್ರಹಿಸಬೇಕು. ಎರಡು ದಿನಗಳಲ್ಲಿಯೂ ಮಧ್ಯಾಹ್ನವ್ಯಾಪ್ತಿಯು ಇದ್ದರೆ ಹಿಂದಿನ ದಿನದಲ್ಲಿಯೇ ಆಚರಿಸಬೇಕು. ಪ್ರದೋಷಕಾಲಕ್ಕೆ

ವ್ಯಾಪ್ತಿಯುಳ್ಳದ್ದನ್ನು ಪರಿಗ್ರಹಿಸಬೇಕೆಂದು ಕೌಸ್ತುಭಕಾರರು ಹೇಳಿರುವದರಿಂದ ಎರಡು ದಿನಗಳಲ್ಲಿಯೂ, ಪ್ರದೋಷಕಾಲ ವ್ಯಾಪ್ತಿಯಿದ್ದಲ್ಲಿ ಎರಡು ವಾಕ್ಯಗಳಿಗೂ ವಿರೋಧ ಇಲ್ಲದೆ ಇರುವದಕ್ಕಾಗಿ ಪರದಿನವನ್ನೇ ಗ್ರಹಿಸಬೇಕು. ಹಿಂದಿನ ದಿನದಲ್ಲಿ ಪ್ರದೋಷಕ್ಕೆ ಮಾತ್ರ ಪರದಿನದಲ್ಲಿ ಮಧ್ಯಾಹ್ನಕ್ಕೆ ಮಾತ್ರವೇ ವ್ಯಾಪ್ತಿ ಇದ್ದಲ್ಲಿ ಆಗ ಬಹುಜನ ಶಿಷ್ಟರ ಆಚರಣೆಯ ಪ್ರಕಾರ ಪ್ರದೋಷವ್ಯಾಪ್ತಿಯುಳ್ಳ ಹಿಂದಿನ ದಿನವನ್ನೇ ಪರಿಗ್ರಹಿಸಬೇಕು. ಅಲ್ಲದೆ "ಅರ್ಕಪರ್ವದ್ವಯೇರಾತ್ರೌ ಚತುರ್ದಶ್ಯಷ್ಟಮೀ ದಿವಾ"॥ಭಾನುವಾರ, ಪೂರ್ಣಿಮಾ ಅಮಾವಾಸ್ಯಗಳಲ್ಲಿ ರಾತ್ರಿಯಲ್ಲಿಯೂ, ಚತುರ್ದಶಿ ಅಷ್ಟಮಿಗಳಲ್ಲಿ ಹಗಲಿನಲ್ಲಿಯೂ (ಭೋಜನವು ನಿಷಿದ್ಧವಾಗಿದೆ.) ಎಂಬ ವಚನದಿಂದ ಊಟ ಮಾಡುವದನ್ನು ಬಿಡಬೇಕೆಂಬುವದೊಂದು ಹೊರತು ಇಲ್ಲಿ ಯಾತ್ತಾವ ವ್ರತವೂ ಇಲ್ಲ. "ನಿಷೇಧಸ್ತು ನಿವೃತ್ತ್ಯಾತ್ಮಾ ಕಾಲಮಾತ್ರಮಪೇಕ್ಷತೆ" 'ನಿವೃತ್ತಿ ಎಂಬ ಅರ್ಥವುಳ್ಳ ನಿಷೇಧ ಶಬ್ದವು ಕಾಲವನ್ನು ಮಾತ್ರ ಅಪೇಕ್ಷಿಸುವದು' ಎಂಬ ವಚನದಿಂದ ಭೋಜನಕಾಲದಲ್ಲಿ ವ್ಯಾಪ್ತಿಯುಳ್ಳ ಅಷ್ಟಮಿಯನ್ನು ಬಿಟ್ಟು ನವಮಿಯಲ್ಲಾಗಲೀ ಸಪ್ತಮಿಯಲ್ಲಾಗಲೀ ಊಟಮಾಡಬಹುದೆಂತ ತೋರುತ್ತೆ. ಇದು ಯುಕ್ತವೋ, ಅಯುಕ್ತವೋ ಎಂಬುದನ್ನು ವಿದ್ವಾಂಸರು ವಿಚಾರಿಸಬೇಕು. (ಎಂದು ಧರ್ಮಸಿಂಧುಕಾರರು ಅಭಿಪ್ರಾಯ ಪಡುತ್ತಾರೆ.)

ಇಲ್ಲಿಗೆ ಅಷ್ಟಮೀನಿರ್ಣಯವೆಂಬ ೧೬ನೆಯ ಉದ್ದೇಶವು ಮುಗಿದುದು.

---

## [ ೧೭ ] ನವಮೀ ನಿರ್ಣಯ.

ಎಲ್ಲಾ ಸಂದರ್ಭದಲ್ಲಿಯೂ, ಅಷ್ಟಮೀ ಯುತವಾದ ನವಮಿಯನ್ನೇ ಪರಿಗ್ರಹಿಸಬೇಕು. ಇಲ್ಲಿಗೆ ನವಮೀನಿರ್ಣಯವೆಂಬ ೧೭ನೆಯ ಉದ್ದೇಶವು.

---

## [ ೧೮ ] ದಶಮೀ ನಿರ್ಣಯ.

ಉಪವಾಸಾದಿಗಳಲ್ಲಿ ನವಮೀ ಯುಕ್ತವಾದ ದಶಮಿಯನ್ನೇ ಪರಿಗ್ರಹಿಸಬೇಕು. ನವಮೀ ಯುಕ್ತವಾದದ್ದು ದೊರೆಯದೇ ಇದ್ದಲ್ಲಿ ಏಕಾದಶೀ ವಿದ್ಧವಾದದ್ದನ್ನೇ ಪರಿಗ್ರಹಿಸಬಹುದು.

ಇಲ್ಲಿಗೆ ದಶಮೀನಿರ್ಣಯವೆಂಬ ೧೮ನೆಯ ಉದ್ದೇಶವು ಮುಗಿದುದು.

---

[ ೧೯ ]

## ಏಕಾದಶೀ ನಿರ್ಣಯ.

ಏಕಾದಶಿಯ ಉಪವಾಸವು, 'ಏಕಾದಶಿಯಲ್ಲಿ ಊಟ ಮಾಡಬಾರದೆಂಬ ನಿಷೇಧಪಾಲನಾತ್ಮಕವೆಂತಲೂ, ವ್ರತರೂಪವಾದದ್ದೆಂತಲೂ ಎರಡು ಪ್ರಕಾರವಾಗಿರುತ್ತೆ. ಮೊದಲನೆಯದರಲ್ಲಿ ಪುತ್ರವಂತನಾದ ಗೃಹಸ್ಥನಿಗೂ ಕೃಷ್ಣಪಕ್ಷದಲ್ಲಿ ಸಹಾ ಅಧಿಕಾರವಿರುತ್ತೆ. ವ್ರತರೂಪವಾದ ಉಪವಾಸವನ್ನು ಮಾತ್ರ ಪುತ್ರವಂತರೂ ಗೃಹಸ್ಥರೂ ಕೂಡ ಕೃಷ್ಣಪಕ್ಷದಲ್ಲಿ ಮಾಡಬಾರದು. ಆದರೆ 'ಏಕಾದಶೀವ್ರತವನ್ನು ಮಾಡುತ್ತೇನೆ'ಂದು ಮಂತ್ರವತ್ತಾಗಿ ಸಂಕಲ್ಪವನ್ನು ಮಾಡದೆ ಅನ್ನವನ್ನು ಊಟ ಮಾಡುವದನ್ನು ಬಿಟ್ಟು ತನ್ನ ಶಕ್ತಿಗೆ ಅನುಸಾರವಾದ ನಿಯಮದಿಂದಿರಬೇಕು. ತಿಥಿಯು ಕ್ಷಯವಾದಾಗ ಶುಕ್ಲೈಕಾದಶಿಯಲ್ಲಿಯೂ ಹೀಗೆಯೇ ಎಂದು ತಿಳಿಯತಕ್ಕದ್ದು. **ಶಯನ್ಯೈಕಾದಶಿ**ಗೂ (ಆಷಾಢ ಶು||೧೧) **ಬೋಧನ್ಯೈಕಾದಶಿ**ಗೂ (ಕಾರ್ತಿಕ ಶು||೧೧) ಮಧ್ಯದಲ್ಲಿ ಬರುವ ಕೃಷ್ಣಪಕ್ಷದ ಏಕಾದಶಿಯಲ್ಲಿ ಪುತ್ರವಂತರಾದ ಗೃಹಸ್ಥರೇ ಮೊದಲಾದ ಸಕಲರಿಗೂ ಉಪವಾಸ ಮಾಡುವದಕ್ಕೆ ಅಧಿಕಾರವಿರುತ್ತೆ. ವಿಷ್ಣುವಿನ ಸಾಯುಜ್ಯವು ಲಭಿಸಬೇಕೆಂದೂ, ಆಯುಷ್ಯವು ಹೆಚ್ಚಾಗಬೇಕೆಂದೂ, ಮಕ್ಕಳಾಗಬೇಕೆಂದೂ ಅಪೇಕ್ಷಿಸುವವರು ಕಾಮ್ಯವಾಗಿ ಆಚರಿಸುವ ವ್ರತವನ್ನು ಎರಡು ಪಕ್ಷಗಳಲ್ಲಿಯೂ, ಮಾಡಬೇಕು. ಇದರಲ್ಲಿ ಯಾವ ನಿಷೇಧವೂ ಇಲ್ಲ. ವೈಷ್ಣವಗೃಹಸ್ಥರಿಗೆ ಕೃಷ್ಣಪಕ್ಷದ ಏಕಾದಶಿಯಲ್ಲಿಯೂ ಉಪವಾಸ ಮಾಡಬೇಕಾದದ್ದು ನಿತ್ಯವು. ಏಕಾದಶೀವ್ರತವನ್ನು ಮಾಡದೇ ಬಿಡುವದರಲ್ಲಿ ಪ್ರತ್ಯವಾಯ ಉಂಟೆಂದೂ, ಮಾಡುವದರಲ್ಲಿ ಐಶ್ವರ್ಯ ಮೊದಲಾದ ಫಲಪ್ರಾಪ್ತಿಯಾಗುವದೆಂದೂ ತಿಳಿದು ಬರುವದರಿಂದ ಈ ವ್ರತವು ಶೈವ, ವೈಷ್ಣವ, ಸೌರ ಇವರೇ ಮೊದಲಾದ ಸಕಲ ಮತದ ಜನರಿಗೂ ನಿತ್ಯವೂ, ಕಾಮ್ಯವೂ ಕೂಡ ಆಗಿದೆ. ಕೆಲವರು ಒಂದು ಮುಹೂರ್ತವೇ ಮೊದಲಾದಷ್ಟು ದಶಮಿಯು ಇದ್ದರೂ ಅದು 'ದಶಮಿಯೇ' ಎಂದು ಭಾವಿಸಿ ಊಟವನ್ನೇ ಮಾಡಬೇಕೆಂದೂ ಸೂರ್ಯೋದಯಕ್ಕಿಂತಲೂ ಮುಂಚಿತವಾಗಿಯೇ ಪ್ರಾರಂಭವಾಗಿ ಶುದ್ಧವಾಗಿಯೂ, ಹೆಚ್ಚಾಗಿಯೂ ಇರುವ

ದ್ವಾದಶಿಯಲ್ಲಿ ಒಟ್ಟಿಗೆ ಎರಡುದಿನಗಳೂ ಉಪವಾಸ ಮಾಡಬೇಕೆಂದೂ ತಿಥಿ ಪಾಲನೆಯನ್ನು ಹೇಳುತ್ತಾರೆ. (ಅಂದರೆ ದಶಮಿ ಘ. ೨-೦ ಉಪರಿ ಏಕಾದಶಿ ೫೭-೩೦, ಮೂರನೆಯ ದಿನ ದ್ವಾದಶಿ ೬೦-೦, ಆ ಮೂರನೆಯ ದಿನ ದ್ವಾದಶಿ ೧-೦ ಹೀಗೆ ಇದ್ದರೆ, ದಶಮೀ ಯುಕ್ತವಾದ ಏಕಾದಶಿಯಲ್ಲಿ ಊಟವನ್ನೇ ಮಾಡಬೇಕೆಂತಲೂ ದ್ವಾದಶಿ ಇರುವ ಮುಂದಿನ ಎರಡು ದಿನಗಳಲ್ಲಿಯೂ ಉಪವಾಸ ಮಾಡಬೇಕೆಂತಲೂ ಹೇಳುತ್ತಾರೆ.) ಇದು ಸರಿಯಲ್ಲ. ಎಂಟು ವರ್ಷ ವಯಸ್ಸಾದ ಮೇಲೆ ಎಂಭತ್ತು ವರ್ಷಗಳು ತುಂಬುವವರಿಗೂ ಏಕಾದಶೀ ವ್ರತವನ್ನು ಮಾಡಬೇಕು. ಶಕ್ತಿಯಿದ್ದರೆ ಎಂಭತ್ತು ವರ್ಷವಾದ ಮೇಲೂ ಮಾಡಬಹುದು.

ಗಂಡನುಳ್ಳ ಸ್ತ್ರೀಯರು (ಸುಮಂಗಲೆಯರು) ಗಂಡನ ಅಥವಾ (ತಂದೆ ಯ ಮನೆಯಲ್ಲಿರುವಾಗ) ತಂದೆಯ ಅಥವಾ ತತ್ಸ್ಥಾನೀಯರ ಅಪ್ಪಣೆಯಿಲ್ಲದೆ ಉಪವಾಸವ್ರತವನ್ನು ಮಾಡಿದಲ್ಲಿ ಆ ವ್ರತವು ನಿಷ್ಫಲವಾಗುವದಲ್ಲದೆ, ಗಂಡನಿಗೆ ಆಯುಷ್ಯವು ಕ್ಷೀಣವಾಗುವದು; ಮತ್ತು ಆಕೆಗೆ ನರಕಪ್ರಾಪ್ತಿಯೂ ಆಗುವದು. ಉಪವಾಸ ಮಾಡುವದಕ್ಕೆ ಅಶಕ್ತರಾದವರು ಮಾತ್ರ "ನಕ್ತಂ ಹವಿಷ್ಯಾನ್ನ, ಮನೌದನಂವಾ, ಫಲಂ, ತಿಲಾಃ, ಕ್ಷೀರ, ಮಥಾಂಬು, ಚಾಜ್ಯಂ || ಯತ್ಪಂಚ ಗವ್ಯಂ, ಯದಿಚಾಪಿವಾಯುಃ, ಪ್ರಶಸ್ತ ಮತ್ರೋತ್ತರ ಮುತ್ತರಂಚ||" 'ನಕ್ತಭೋಜನವೂ, ಅನ್ನವಲ್ಲದ ಹವಿದ್ರವ್ಯವೂ, ಹಣ್ಣು, ಎಳ್ಳು, ಹಾಲು, ನೀರು, ತುಪ್ಪ, ಪಂಚಗವ್ಯ, ವಾಯು ಇವುಗಳಲ್ಲಿ ಮುಂದೆ ಮುಂದಿನವುಗಳು ಶ್ರೇಷ್ಠವಾದವುಗಳೆಂಬ ಈ ಪಕ್ಷಗಳಲ್ಲಿ ಶಕ್ತಿಯ ತಾರತಮ್ಯಾನುಸಾರ ಯಾವದಾದರೊಂದನ್ನು ತೆಗೆದುಕೊಳ್ಳುತ್ತ ಏಕಾದಶಿಯನ್ನು ನಡಿಸಬೇಕೇ ಹೊರತು ಬಿಡಕೂಡದು. ಪ್ರಮಾದಾದಿಗಳಿಂದ ಏಕಾದಶಿಯಲ್ಲಿ ಉಪವಾಸಾದಿಗಳನ್ನು ಮಾಡದೆ ತಪ್ಪಿದರೆ ದ್ವಾದಶಿಯಲ್ಲಿಯಾದರೂ ವ್ರತವನ್ನು ಮಾಡಬೇಕು. ದ್ವಾದಶಿಯಲ್ಲಿಯೂ ಮಾಡದೆ ಬಿಟ್ಟಲ್ಲಿ ಯಾವಮಧ್ಯವೆಂಬ ಚಾಂದ್ರಾಯಣವನ್ನು ಮಾಡುವದು ಪ್ರಾಯಶ್ಚಿತ್ತವು. ನಾಸ್ತಿಕತ್ವದಿಂದ ಬಿಟ್ಟರೆ ಪಿಪೀಲಿಕಾಮಧ್ಯವೆಂಬ ಚಾಂದ್ರಾಯಣವನ್ನು ಮಾಡಬೇಕು. ಅಶಕ್ತರಾದ ಗಂಡ, ತಂದೆ ಇವರೇ ಮೊದಲಾದವರಿಗೋಸ್ಕರವಾಗಿ ಹೆಂಡತಿ, ಮಗ, ಅಕ್ಕತಂಗಿಯರು, ಅಣ್ಣತಮ್ಮಂದಿರು

ಇವರೇ ಮೊದಲಾದವರು ಏಕಾದಶೀ ವ್ರತವನ್ನು ನಡೆಸುವದರಲ್ಲಿ ನೂರು ಯಜ್ಞ ಮಾಡಿದಷ್ಟು ಪುಣ್ಯಉಂಟು.

## ಏಕಾದಶೀವ್ರತವನ್ನು ಮಾಡಬೇಕಾದ ದಿನ ನಿರ್ಣಯ.

ಈ ವ್ರತಾಧಿಕಾರವುಳ್ಳವರು ವೈಷ್ಣವರೆಂತಲೂ, ಸ್ಮಾರ್ತರೆಂತಲೂ, ಎರಡು ಪ್ರಕಾರವಾಗಿದ್ದಾರೆ. ಅವರಲ್ಲಿ ಯಾರು ವಿಷ್ಣುಸಂಬಂಧವಾದ ದೀಕ್ಷೆಯನ್ನು ತೆಗೆದುಕೊಂಡು ಆ ಲಾಂಛನಗಳಿಂದ ಯುಕ್ತರಾಗಿರುವರೋ ಅವರು ವೈಷ್ಣವರೆಂತಲೂ, ಈ ವಿಧವಾದ ವಿಷ್ಣುದೀಕ್ಷಾಲಾಂಛನಗಳೇನೂ ಇಲ್ಲದವರು ಸ್ಮಾರ್ತರೆಂತಲೂ ಮಹಾನಿಬಂಧನಗಳಲ್ಲಿ ಹೇಳಿದೆ ಆದರೆ 'ವೈಷ್ಣವತ್ವ ಸ್ಮಾರ್ತತ್ವಗಳು ಅವರವರ ವಂಶಪಾರಂಪರ್ಯವಾಗಿ ನಡೆದು ಬಂದು ಪ್ರಸಿದ್ಧವಾಗಿದೆ, ಎಂದು ದೊಡ್ಡವರು ಹೇಳುತ್ತಾರೆ' ಎಂದು ನಿರ್ಣಯ ಸಿಂಧುವಿನಲ್ಲಿ ಹೇಳಿದೆ. ಇದೇ ಸಕಲ ದೇಶಗಳಲ್ಲಿಯೂ ಶಿಷ್ಟಪರಿಗೃಹೀತವಾಗಿ ಆಚರಣೆಯಲ್ಲಿದೆ.

ವೇಧೆಯು, ಅರುಣೋದಯಕಾಲಕ್ಕೆ ದಶಮೀವೇಧೆಯೆಂತಲೂ, ಸೂರ್ಯೋದಯಕಾಲಕ್ಕೆ ದಶಮೀವೇಧೆಯೆಂತಲೂ ಎರಡು ಪ್ರಕಾರವಾಗಿರುತ್ತೆ. ಸೂರ್ಯೋದಯಕ್ಕೆ ಹಿಂದಿನ ನಾಲ್ಕು ಘಳಿಗೆಯುಕಾಲವು ಅರುಣೋದಯವೆನಿಸುವದು. ಸೂರ್ಯೋದಯವಂತೂ ಸ್ಪಷ್ಟವಾಗಿಯೇ ಇದೆ (ಅಂದರೆ ಹಿಂದಿನ ದಿನ ೬೦ ಘಳಿಗೆಯಾದೊಡನೆಯೇ ಮುಂದಿನ ದಿವದ ಸೂರ್ಯೋದಯವೆಂತ ತಿಳಿಯಬೇಕು.) ಆದರಿಂದ ೫೬ ಘಳಿಗೆಯ ಮೇಲೆ ಒಂದು ಪಳೆ ಮಾತ್ರ ದಶಮಿಯು ಇದ್ದರೂ ಅದು ಅರುಣೋದಯ ವೇಧೆಯಾಗುವದು. ಇದು ವೈಷ್ಣವ ವಿಷಯವು. ಅರವತ್ತು ಗಳಿಗೆಗೆ ಆಗುವ ಸೂರ್ಯೋದಯಾನಂತರದಲ್ಲಿ ೧ ಪಳೆ ಮಾತ್ರ ದಶಮಿಯು ಇದ್ದರೂ ಅದು ಸೂರ್ಯೋದಯವೇಧೆಯಾಗುವದು. ಇದು ಸ್ಮಾರ್ತವಿಷಯವು. ಜ್ಯೋತಿಷ್ಕರ ವಿವಾದದಿಂದ (ಅಂದರೆ ಒಂದೊಂದು ಪಂಚಾಂಗದಲ್ಲಿ ಒಂದೊಂದು ಘಳಿಗೆ ಹೆಚ್ಚು ಕಡಿಮೆಯಾಗುವದರಲ್ಲಿ) ವೇಧೆಯೇ ಮೊದಲಾದವುಗಳು ಸಂದೇಹವಾದರೆ,

"ಬಹು ವಾಕ್ಯ ವಿರೋಧೇನ ಬ್ರಾಹ್ಮಣೇಷು ವಿವಾದಿಷು ||
ಏಕಾದಶೀಂ ಪರಿತ್ಯಜ್ಯ ದ್ವಾದಶೀಂ ಸಮುಪೋಷಯೇತ್ || "

ಇವು ವಾಕ್ಯಗಳು (ಪಂಚಾಂಗಗಳ ಸಿದ್ಧಾಂತ ವಾಕ್ಯಗಳು) ಪರಸ್ಪರ ವಿರುದ್ಧಗಳಾಗಿದ್ದು, ಬ್ರಾಹ್ಮಣರು ವಿವಾದ ಮಾಡಬೇಕಾದ ಸಂಭವದಲ್ಲಿ ಏಕಾದಶಿಯನ್ನು ಬಿಟ್ಟು ದ್ವಾದಶಿಯಲ್ಲಿಯೇ ಉಪವಾಸ ಮಾಡಬೇಕು. ಇದರಂತೆ ಏಕಾದಶಿಯಲ್ಲಿಯೂ ಶುದ್ಧವೆಂತಲೂ, ವಿದ್ಧವೆಂತಲೂ ಎರಡು ಭೇದಗಳಿವೆ.

## ವೈಷ್ಣವಭಾಗವತ ಸಂಪ್ರದಾಯದ ಏಕಾದಶಿಗೆ ಉದಾಹರಣೆ.

ಅರುಣೋದಯಕ್ಕೆ ದಶಮೀವೇಧೆಯುಳ್ಳದ್ದು, ವಿದ್ಧೈಕಾದಶಿಯು, ವೈಷ್ಣವರು ಅದನ್ನು ಬಿಟ್ಟು ದ್ವಾದಶಿಯಲ್ಲಿಯೇ ಉಪವಾಸ ಮಾಡಬೇಕು. ಅರುಣೋದಯಕ್ಕೆ ದಶಮೀವೇಧೆಯಿಲ್ಲದೇ ಇರುವದು ಶುದ್ಧೈಕಾದಶಿಯು. ಈ ಶುದ್ಧೈಕಾದಶಿಯಲ್ಲಿ (೧) ಏಕಾದಶಿ ಮಾತ್ರ ಹೆಚ್ಚಾಗಿರುವದೆಂದೂ, (೨) ದ್ವಾದಶಿ ಮಾತ್ರ ಹೆಚ್ಚಾಗಿರುವದೆಂದೂ (೩) ಎರಡೂ ಹೆಚ್ಚಾಗಿರುವದೆಂದೂ (೪) ಎರಡೂ ಹೆಚ್ಚಾಗಿ ಇಲ್ಲದೆ ಇರುವದೆಂದೂ ನಾಲ್ಕು ಭೇದಗಳಿವೆ. ಹೆಚ್ಚಾಗಿರುವದೆಂದರೆ ಸೂರ್ಯೋದಯಾನಂತರದಲ್ಲಿಯೂ ಇರುವದೆಂದು ಅರ್ಥವು. ಉದಾಹರಣೆ—ದಶಮಿ ೫೫-೦, ಏಕಾದಶಿ ೬೦-೧, ದ್ವಾದಶಿ ಕ್ಷಯದಿಂದ ೫೮. ಇದು ಏಕಾದಶೀ ಮಾತ್ರ ಹೆಚ್ಚಾಗಿರುವ ಶುದ್ಧೈಕಾದಶಿಯು ಇದರಲ್ಲಿ ವೈಷ್ಣವರು ದ್ವಾದಶಿಯಲ್ಲಿಯೂ, ಸ್ಮಾರ್ತ ಗೃಹಸ್ಥರು ಏಕಾದಶಿಯಲ್ಲಿಯೂ ಉಪವಾಸ ಮಾಡಬೇಕು. ಅನಂತರ ದಶಮಿ ೫೫-೦, ಏಕಾದಶಿ ೫೮-೦, ದ್ವಾದಶಿ ೬೦-೧ ಇದು ದ್ವಾದಶೀ ಮಾತ್ರ ಅಧಿಕವಾದ ಶುದ್ಧೈಕಾದಶಿಯು. ಇಲ್ಲಿ ವೈಷ್ಣವರು ದ್ವಾದಶಿಯಲ್ಲಿ ಉಪವಾಸ ಮಾಡಬೇಕು. ಸ್ಮಾರ್ತಗೃಹಸ್ಥರು ಹಿಂದಿನ ದಿನದಲ್ಲಿಯೇ ಉಪವಾಸ ಮಾಡಬೇಕು. ಅನಂತರ ದಶಮಿ ೫೫-೦, ಏಕಾದಶಿ ೬೦-೧, ದ್ವಾದಶಿ ೫೫-೦ ಇದು ಎರಡೂ ಅಧಿಕವಾದ ಶುದ್ಧೈಕಾದಶಿಯು. ಇದರಲ್ಲಿ ವೈಷ್ಣವರೂ ಸ್ಮಾರ್ತರೂ ಸಹ ದ್ವಾದಶಿಯಲ್ಲಿಯೇ ಉಪವಾಸ ಮಾಡಬೇಕು. ಅನಂತರ ದಶಮಿ ೫೫, ಏಕಾದಶಿ ೫೭-೦, ದ್ವಾದಶಿ ೫೮-೦ ಇದು ಎರಡೂ ಅಧಿಕವಾಗದ ಶುದ್ಧೈಕಾದಶಿಯು. ಇದರಲ್ಲಿ ವೈಷ್ಣವರೂ, ಸ್ಮಾರ್ತರೂ ಸಹಾ ಏಕಾದಶಿಲ್ಲಿಯೇ ಉಪವಾಸ ಮಾಡಬೇಕು. ಎಂದು ಸಂಕ್ಷೇಪವಾಗಿ ವೈಷ್ಣವೈಕಾದಶೀ ನಿರ್ಣಯವು.

## ಸ್ಮಾರ್ತೈಕಾದಶೀ ನಿರ್ಣಯ.

ಇದು ಶುದ್ಧವೆಂತಲೂ, ವಿದ್ಧವೆಂತಲೂ ಎರಡು ಬಗೆಯಾಗಿದೆ. ಸೂರ್ಯೋದಯಕಾಲಕ್ಕೆ ದಶಮೀವೇಧೆಯುಳ್ಳದ್ದು **ವಿದ್ಧೈಕಾದಶಿ**ಯು. ಹಾಗಿಲ್ಲದಿರುವದು **ಶುದ್ಧೈಕಾದಶಿ**ಯಾಗಿರುತ್ತೆ. ಇವೆರಡೂ ಪ್ರತ್ಯೇಕವಾಗಿ ನಾಲ್ಕು ವಿಧವಾಗಿರುತ್ತವೆ. ಹ್ಯಾಗಂದರೆ,

(೧) ಏಕಾದಶಿಯು ಮಾತ್ರ ಹೆಚ್ಚಾಗಿರುವದೆಂದೂ (೨) ದ್ವಾದಶಿಯು ಮಾತ್ರ ಹೆಚ್ಚಾಗಿರುವದೆಂದೂ (೩) ಎರಡೂ ಹೆಚ್ಚಾಗಿ ಇರುವದೆಂತಲೂ (೪) ಎರಡೂ ಹೆಚ್ಚಾಗದೆ ಇರುವದೆಂತಲೂ ಒಟ್ಟು ಎಂಟು ವಿಧವಾಗಿವೆ

### ಉದಾಹರಣೆಗಳು.

(೧) ದಶಮಿ ೫೮-೦, ಏಕಾದಶಿ ೬೦-೧, ದ್ವಾದಶಿಕ್ಷಯವಾದುದರಿಂದ ೫೮-೦ ಇದು ಏಕಾದಶಿಯು ಮಾತ್ರ ಹೆಚ್ಚಾಗಿರುವ ಶುದ್ಧೈಕಾದಶಿಯು.

(೨) ದಶಮಿ ೪-೦, ಏಕಾದಶಿ ೨-೦, ದ್ವಾದಶಿ ಕ್ಷಯವಾದುದರಿಂದ ೫೮-೦ ಇದು ಏಕಾದಶಿಯುಮಾತ್ರಹೆಚ್ಚಾಗಿರುವ ವಿದ್ಧೈಕಾದಶಿಯು.

ಇವೆರಡರಲ್ಲಿಯೂ ಸ್ಮಾರ್ತಗೃಹಸ್ಥರು ಹಿಂದಿನ ಏಕಾದಶಿಯಲ್ಲಿಯೇ ಉಪವಾಸ ಮಾಡಬೇಕು. ಯತಿಗಳೂ, ನಿಷ್ಕಾಮರಾದ ಗೃಹಸ್ಥರೂ, ವಾನಪ್ರಸ್ಥರೂ, ವಿಧವೆಯರೂ, ವೈಷ್ಣವರೂ ಸಹಾ ಪರದಿನದಲ್ಲಿ ಉಪವಾಸಮಾಡಬೇಕು. ವಿಷ್ಣುಪ್ರೀತಿಯನ್ನು ಅಪೇಕ್ಷಿಸುವ ಸ್ಮಾರ್ತರು ಈ ಸಂದರ್ಭದಲ್ಲಿ ಎರಡುದಿನಗಳಲ್ಲಿಯೂ ಉಪವಾಸ ಮಾಡಬೇಕೆಂದು ಕೆಲವರು ಹೇಳುವರು.

ಎರಡು ಹೆಚ್ಚಾಗಿ ಇರುವದಕ್ಕೆ ಉದಾಹರಣೆ:—

(೩) ದಶಮಿ ೫೮-೦, ಏಕಾದಶಿ ೬೦-೧, ದ್ವಾದಶಿ ೪-೦ ಇದು ಎರಡೂ ಹೆಚ್ಚಾಗಿರುವ ಶುದ್ಧೈಕಾದಶಿಯು.

(೪) ದಶಮಿ ೨-೦, ಏಕಾದಶಿ ೩-೦, ದ್ವಾದಶಿ ೪. ಇದು ಎರಡೂ ಹೆಚ್ಚಾಗಿರುವ ವಿದ್ಧೈಕಾದಶಿಯು. ಈ ಎರಡು ಸಂದರ್ಭಗಳಲ್ಲಿಯೂ ಸಕಲ ಸ್ಮಾರ್ತರೂ, ವೈಷ್ಣವರೂ ಸಹ ಪರದಿನದ (ಮುಕ್ಕ) ಏಕಾದಶಿಯಲ್ಲಿಯೇ ಉಪವಾಸ ಮಾಡಬೇಕು.

ದ್ವಾದಶಿಯು ಮಾತ್ರ ಅಧಿಕವಾಗಿರುವ ಶುದ್ಧೈಕಾದಶಿಗೆ ಉದಾಹರಣೆ:—

(೫) ದಶಮಿ ೫೮-೦, ಏಕಾದಶಿ ೫೯-೦, ದ್ವಾದಶಿ ೬೦-೧ ಇದು ದ್ವಾದಶಿಯು ಮಾತ್ರ ಹೆಚ್ಚಾಗಿರುವ ಶುದ್ಧೈಕಾದಶಿಯು. ಈ ಸಂದರ್ಭದಲ್ಲಿ ಏಕಾದಶಿಯು ಶುದ್ಧವಾಗಿರೋಣದರಿಂದ ಸ್ಮಾರ್ತರು ಏಕಾದಶಿಯಲ್ಲಿಯೇ ಉಪವಾಸ ಮಾಡಬೇಕಲ್ಲದೆ, ದ್ವಾದಶಿಯಲ್ಲಿ ಮಾಡಬಾರದೆಂದು ಮಾಧವಾಚಾರ್ಯರ ಮತವು ಹೇಮಾದ್ರಿಮತದಲ್ಲಿ ಪರದಿನದ ದ್ವಾದಶಿಯಲ್ಲಿಯೇ ಉಪವಾಸ ಮಾಡಬೇಕೆಂದು ಇದೆ. ಮೋಕ್ಷಾಪೇಕ್ಷಿಗಳಾದ ಸ್ಮಾರ್ತರೂ ಪರದಿವಸದಲ್ಲಿಯೇ ಉಪವಾಸ ಮಾಡಬೇಕಂದು ಕೆಲವರು ಹೇಳುತ್ತಾರೆ.

(೬) ದಶಮಿ ೧, ಏಕಾದಶಿ ಕ್ಷಯದಿಂದ ೫೮, ದ್ವಾದಶಿ ವೃದ್ಧಿಯಿಂದ ೬೦-೧, ಇದು ದ್ವಾದಶಿಯು ಮಾತ್ರ ಅಧಿಕವಾಗಿರುವ ವಿದ್ಧೈಕಾದಶಿಯು. ಇಲ್ಲಿ ಏಕಾದಶಿಯು ವಿದ್ಧವಾಗಿರೋಣದರಿಂದ ಸ್ಮಾರ್ತರೂ ಕೂಡ ದ್ವಾದಶಿಯಲ್ಲಿಯೇ ಉಪವಾಸ ಮಾಡಬೇಕು. ಒಟ್ಟಿನಲ್ಲಿ ಏಕಾದಶಿ ದ್ವಾದಶಿಗಳೆರಡೂ ಅಧಿಕವಾದಾಗಲೂ, ದ್ವಾದಶಿಯು ಮಾತ್ರ ಅಧಿಕವಾದಾಗಲೂ ಕೂಡ ಸ್ಮಾರ್ತರು ವಿದ್ಧೈಕಾದಶಿಯನ್ನು ಬಿಡಬೇಕೇಹೊರತು ಮತ್ತಾವ ಸಂದರ್ಭದಲ್ಲಿಯೂ ಬಿಡಬೇಕಾದುದಿಲ್ಲ. ವೈಷ್ಣವರು ಮಾತ್ರ ಹಿಂದೆ ಹೇಳಿದ ಹೆಚ್ಚಾಗಿರುವ ಈ ಆರು ವಿಧವಾದ ಏಕಾದಶಿಯನ್ನು ಬಿಟ್ಟು ದ್ವಾದಶಿಯಲ್ಲಿಯೇ ಉಪವಾಸ ಮಾಡಬೇಕು.

ಎರಡೂ ಹೆಚ್ಚಾಗದೆ ಇರುವ ಶುದ್ಧೈಕಾದಶಿಗೆ ಉದಾಹರಣೆ:—

(೭) ದಶಮಿ ೫೭-೦, ಏಕಾದಶಿ ೫೮-೦, ದ್ವಾದಶಿ ೫೯. ಇದು ಎರಡೂ ಹೆಚ್ಚಾಗದೆ ಇರುವ ಶುದ್ಧೈಕಾದಶಿಯು. ಈ ಸಂದರ್ಭದಲ್ಲಿ ಸ್ಮಾರ್ತರು ಏಕಾದಶಿಯಲ್ಲಿಯೇ ಉಪವಾಸ ಮಾಡಬೇಕೇ ಹೊರತು ದ್ವಾದಶಿಯಲ್ಲಿ ಉಪವಾಸ ಮಾಡಕೂಡದು. ಅರುಣೋದಯ ವೇಧೆ ಇರುವದರಿಂದ ವೈಷ್ಣವರು ದ್ವಾದಶಿಯಲ್ಲಿಯೇ ಉಪವಾಸ ಮಾಡಬೇಕು.

ಎರಡೂ ಹೆಚ್ಚಾಗಿಲ್ಲದ ವಿದ್ಧೈಕಾದಶಿಗೆ ಉದಾಹರಣೆ:—

(೮) ದಶಮಿ ೨-೦, ಏಕಾದಶಿ ಕ್ಷಯವಾದ್ದರಿಂದ ೫೬-೦, ದ್ವಾದಶಿ ೫೫-೦, ಇದು ಎರಡೂ ಹೆಚ್ಚಾಗಿಲ್ಲದ ವಿದ್ಧೈಕಾದಶಿಯು. ಇದರಲ್ಲಿಯೂ ಸ್ಮಾರ್ತರು ಏಕಾದಶಿಯಲ್ಲಿಯೂ, ವೈಷ್ಣವರು ದ್ವಾದಶಿಯಲ್ಲಿಯೂ ಉಪವಾಸ ಮಾಡಬೇಕು.

ಮೊದಲಿನ ಎರಡು ಭೇದಗಳಲ್ಲಿ ಹೇಗೋ ಹಾಗೆ ಎರಡೂ ಹೆಚ್ಚಾಗಿಲ್ಲದ ವಿದ್ಧೈಕಾದಶಿಯು ಈ ಕೊನೆಯ ಭೇದದಲ್ಲಿಯೂ ಸಹ, ಯತಿಗಳೂ, ಮೋಕ್ಷಕಾಮಿಗಳೂ, ವಿಧವೆಯರೂ ಸಹ ಪರದಿವಸದಲ್ಲಿ ಉಪವಾಸ ಮಾಡಬೇಕು. ಹಿಂದೆ ಹೇಳಿದ ಮೊದಲಿನ ಎರಡು ಭೇದಗಳೂ ಇದೂ ಸಮಾನವಾಗಿರೋಣದರಿಂದ ವಿಷ್ಣುಪ್ರೀತಿಯನ್ನು ಬಯಸುವವರು ಎರಡು ಉಪವಾಸಗಳನ್ನು ಮಾಡಬೇಕೆಂದು ತೋರುತ್ತೆ. (ಇದು ಧರ್ಮಸಿಂಧುಕಾರರ ಅಭಿಪ್ರಾಯ) ಆದರೆ ಈಗ ಶಿಷ್ಟರು ಹೇಮಾದ್ರಿಮತವನ್ನೂ, ನಿಷ್ಕಾಮಿಗಳು ಹೀಗೆ ಮಾಡಬೇಕೆಂಬುವದೇ ಮೊದಲಾದವುಗಳನ್ನೂ ಸಮ್ಮತಿಸದೆ ಮಾಧವಾಚಾರ್ಯರ ಅಭಿಪ್ರಾಯದಂತೆ ಸ್ಮಾರ್ತರಲ್ಲಿ ಎಲ್ಲರಿಗೂ ಒಂದೇ ವಿಧವಾಗಿ ನಿರ್ಣಯವನ್ನು ಹೇಳುತ್ತಾರೆ. ಯಾವ ಸಂದರ್ಭದಲ್ಲಿಯಾದರೂ ಎರಡು ಉಪವಾಸಗಳನ್ನಾಗಲೀ, ದ್ವಾದಶಿಯು ಹೆಚ್ಚಾಗಿರುವ ಶುದ್ಧೈಕಾದಶಿಯಲ್ಲಿ ಒಂದೇ ಉಪವಾಸವನ್ನಾದರೂ ಪರೋಪವಾಸವನ್ನಾಗಲೀ ಹೇಳುವದಿಲ್ಲ. ಪ್ರಾಯಕವಾಗಿ ಸಕಲ ದೇಶಗಳಲ್ಲಿಯೂ, ಮಾಧವಾಚಾರ್ಯರ ಅಭಿಪ್ರಾಯದಂತೆಯೇ ಆಚರಣೆಯೂ ಇದೆ ಎಂದು ತಿಳಿಯತಕ್ಕದ್ದು. ಈವರೆಗೆ ಹೇಳಿರುವದರಿಂದಲೇ ವೈಷ್ಣವ ಮತ್ತು ಸ್ಮಾರ್ತರ ಹದಿನೆಂಟು ವಿಧವಾದ ಏಕಾದಶೀಭೇದಗಳ ನಿರ್ಣಯವೂ ಹೇಳಿದಂತೆಯೇ ಆಗುತ್ತದೆ ಎಂದು ಭಾವಿಸಬೇಕು. ಇನ್ನೂ ವಿಶದವಾಗಿ ತಿಳಿಯಬೇಕೆಂದು ಅಪೇಕ್ಷೆಯುಳ್ಳವರು ದೊಡ್ಡ ಗ್ರಂಥಗಳಿಂದ ತಿಳಿಯತಕ್ಕದ್ದು. ಈ ಹದಿನೆಂಟು ಭೇದಗಳಲ್ಲಿಯೂ, ಪ್ರತ್ಯೇಕ ಪ್ರತ್ಯೇಕವಾಗಿ ನಿರ್ಣಯೋದಾಹರಣೆಗಳನ್ನು ಹೇಳುವದರಲ್ಲಿ ಸಾಮಾನ್ಯಬುದ್ಧಿಯುಳ್ಳವರಿಗೆ ಭ್ರಾಂತಿಯಾಗಬಹುದೆಂದು ತಿಳಿದು, ಸುಲಭವಾಗಿ ತಿಳಿಯುವಂತೆ ನಿರ್ಣಯ ಸಹಿತವಾದ ಉದಾಹರಣೆಯನ್ನು ಪ್ರತ್ಯೇಕವಾದ ಪಟ್ಟಿಯಲ್ಲಿ ಕೊಟ್ಟಿದೆ. ಅದನ್ನು ನೋಡಿ ತಿಳಿದುಕೊಳ್ಳಬೇಕು. ಇಲ್ಲಿ **ನ್ಯೂನ** ಅಂದರೆ(ಕಡಿಮೆ)ಸೂರ್ಯೋದಯಕ್ಕಿಂತ ಮುಂಚಿತವಾಗಿಯೇ ಮುಗಿದು ಹೋದದ್ದೆಂತಲೂ, **ಸಮ** ಅಂದರೆ ಸೂರ್ಯೋದಯದ ವರಿಗೂ ಇರುವದೆಂತಲೂ (ಅಂದರೆ ೬೦ ಘಳಿಗೆಯುಳ್ಳದ್ದೆಂತಲೂ) **ಅಧಿಕ** (ಹೆಚ್ಚು) ಅಂದರೆ ಸೂರ್ಯೋದಯಾನಂತರವಲ್ಲಿಯೂ ಇರುವದೆಂತಲೂ ತಿಳಿಯತಕ್ಕದ್ದು.

---

# ೨೧ ವೈಷ್ಣವರಿಗೆ ಶುದ್ಧೈಕಾ[illegible]ಗಳು.

ಕೆಳಗೆ ಪಟ್ಟಿಯಲ್ಲಿ ತೋರಿಸಿರುವ ಎಂಡು ಉ[illegible]ನೆಯದು ಧರ್ಮಾಬ್ಧಿ ಯಿಂದಲೂ ೨ನೆಯದು ಈ ಗ್ರಂಥಕಾರರು ಹಿಂದೆ ಕೊ[illegible]ಗಿರುತ್ತೆ.

| | ಧರ್ಮಾಬ್ಧಿಯಲ್ಲಿ ಕೊಟ್ಟಿರುವ ಹೆಸರು. | ದಶಮಿ | | ಏಕಾದಶಿ | | ದ್ವಾದಶಿ | | ಈ ಗ್ರಂಥದಲ್ಲಿ ಹೆಸರು. | ಆಚರಣೆ. |
|---|---|---|---|---|---|---|---|---|---|
| | | ಘ | ಪ | ಘ | ಪ | ಘ | ಪ | | |
| ೧ | ನ್ಯೂನ ದ್ವಾದಶಿಯುಳ್ಳ ಶುದ್ಧವಾದ | ೫೫ | ೫೯ | ೫೯ | ೫೯ | ೫೯ | ೫೯ | ಶುದ್ಧೈಕಾದಶಿ ಯಾವುದೂ ಇಲ್ಲ | ಇವುಗಳಲ್ಲಿ ವೈಷ್ಣವರೂ, ಸ್ಮಾರ್ತರೂ ಕೂಡ ಏಕಾದಶಿಯಲ್ಲಿಯೇ ಉಪವಾಸ ಮಾಡಬೇಕು. |
| | ನ್ಯೂನೈಕಾದಶಿ | ೫೫ | ೦ | ೫೭ | ೦ | ೫೮ | ೦ | | |
| ೨ | ಸಮದ್ವಾದಶಿಯುಳ್ಳ ಶುದ್ಧವಾದ | ೫೫ | ೫೯ | ೫೯ | ೫೯ | ೬೦ | ೦ | | |
| | ನ್ಯೂನೈಕಾದಶಿ | ೫೫ | ೦ | ೫೭ | ೦ | ೫೮ | ೦ | | |
| ೩ | ನ್ಯೂನ ದ್ವಾದಶಿಯುಳ್ಳ ಶುದ್ಧವಾದ | ೫೫ | ೫೯ | ೬೦ | ೦ | ೫೯ | ೫೯ | | |
| | ಸಮೈಕಾದಶಿ | ೫೫ | ೦ | ೫೭ | ೦ | ೫೮ | ೦ | | |
| ೪ | ಸಮದ್ವಾದಶಿಯುಳ್ಳ ಶುದ್ಧ ಸಮೈಕಾದಶಿ | ೫೫ | ೫೫ | ೬೦ | ೦ | ೬೦ | ೦ | | |
| | | ೫೫ | ೦ | ೫೭ | ೦ | ೫೮ | ೦ | | |
| ೫ | ಅಧಿಕವಾದ ದ್ವಾದಶಿಯುಳ್ಳ ಶುದ್ಧ | ೫೫ | ೫೯ | ೫೯ | ೫೯ | ೬೦ | ೧ | ಇವೆರಡೂ ದ್ವಾದಶಿ ಮಾತ್ರ | ಇವುಗಳಲ್ಲಿ ವೈಷ್ಣವರು ದ್ವಾದಶಿಯಲ್ಲಿಯೂ ಸ್ಮಾರ್ತರು ಏಕಾದಶಿಯಲ್ಲಿಯೂ ಉಪವಾಸ ಮಾಡಬೇಕು. |
| | ನ್ಯೂನೈಕಾದಶಿ | ೫೫ | ೦ | ೫೮ | ೦ | ೬೦ | ೧ | | |
| ೬ | ಅಧಿಕ ದ್ವಾದಶಿಯುಳ್ಳ ಶುದ್ಧ ಸಮೈಕಾದಶಿ | ೫೫ | ೫೯ | ೬೦ | ೦ | ೬೦ | ೧ | ಅಧಿಕವಾದ | |
| | | ೫೫ | ೦ | ೫೮ | ೦ | ೬೦ | ೧ | ಶುದ್ಧೈಕಾದಶಿ | |
| ೭ | ನ್ಯೂನ ದ್ವಾದಶಿಯುಳ್ಳ ಅಧಿಕ ಶುದ್ಧೈಕಾದಶಿ | ೫೫ | ೫೯ | ೬೦ | ೧ | ೫೯ | ೫೮ | ಇವೆರಡೂ ಏಕಾದಶಿ ಮಾತ್ರ | ಇವುಗಳಲ್ಲಿ ಸ್ಮಾರ್ತರು ಏಕಾದಶಿಯಲ್ಲಿಯೂ ವೈಷ್ಣವರು ದ್ವಾದಶಿಯಲ್ಲಿಯೂ ಉಪವಾಸ ಮಾಡಬೇಕು. |
| | | ೫೫ | ೦ | ೬೦ | ೧ | ೫೮ | ಕ್ಷ | | |
| ೮ | ಸಮದ್ವಾದಶಿಯುಳ್ಳ ಶುದ್ಧ ಅಧಿಕೈಕಾದಶಿ | ೫೫ | ೫೯ | ೬೦ | ೧ | ೫೫ | ೫೯ | ಅಧಿಕವಾದ | |
| | | ೫೫ | ೦ | ೬೦ | ೧ | ೫೮ | ಕ್ಷ | ಶುದ್ಧೈಕಾದಶಿ | |
| ೯ | ಅಧಿಕದ್ವಾದಶಿಯುಳ್ಳ ಶುದ್ಧ ಅಧಿಕೈಕಾದಶಿ | ೫೫ | ೫೯ | ೬೦ | ೧ | ೬೦ | ೧ | ಇದು ೨ ಅ. | ಇವುಗಳಲ್ಲಿ ಎಲ್ಲಾ ವೈಷ್ಣವರೂ ಸ್ಮಾರ್ತರೂ ಸಹ ಎರಡನೆಯ ಏಕಾದಶಿಯಲ್ಲಿಯೇ ಉಪವಾಸ ಮಾಡಬೇಕು. |
| | | ೫೫ | ೦ | ೬೦ | ೧ | ೫ | ೦ | ಶುದ್ಧೈಕಾದಶಿ | |

## ೨೨ ವೈಷ್ಣವರಿಗೆ ವಿದ್ಧೈಕಾದಶೀ ಭೇದಗಳು.

| | ಧರ್ಮಾಬ್ಧಿಯಲ್ಲಿ ಕೊಟ್ಟಿರುವ ಹೆಸರು. | ದಶಮಿ | | ಏಕಾದಶಿ | | ದ್ವಾದಶಿ | | ಈ ಗ್ರಂಥದಲ್ಲಿನ ಹೆಸರು. | ಆಚರಣೆ. |
|---|---|---|---|---|---|---|---|---|---|
| | | ಘ | ಪ | ಘ | ಪ | ಘ | ಪ | | |
| ೧ | ನ್ಯೂನ ದ್ವಾದಶಿಯುಳ್ಳ ವಿದ್ಧವಾದ ನ್ಯೂನೈಕಾದಶಿ | ೫೬ | ೧ | ೫೯ | ೫೯ | ೫೯ | ೫೯ | ಶುದ್ಧೈಕಾದಶೀ ಭೇದಗಳು | ಈ ನಾಲ್ಕರಲ್ಲಿಯೂ ಸ್ಮಾರ್ತರಿಗೆ ಏಕಾದಶಿಯಲ್ಲಿಯೇ ಉಪವಾಸವು ವೈಷ್ಣವರಿಗೆ ವಿದ್ಧವಾದುದರಿಂದ ದ್ವಾದಶಿಯಲ್ಲಿ ಉಪವಾಸವು. |
| | | ೫೭ | ೦ | ೫೮ | ೦ | ೫೯ | ೦ | | |
| ೨ | ಸಮದ್ವಾದಶಿಯುಳ್ಳ ನ್ಯೂನೈಕಾದಶಿ | ೫೬ | ೧ | ೫೯ | ೫೯ | ೬೦ | ೦ | | |
| | | ೫೭ | ೦ | ೫೮ | ೦ | ೫೯ | ೦ | | |
| ೩ | ನ್ಯೂನ ದ್ವಾದಶಿಯುಳ್ಳ ಸಮೈಕಾದಶಿ | ೫೬ | ೧ | ೬೦ | ೦ | ೫೯ | ೫೯ | | |
| | | ೫೭ | ೦ | ೫೮ | ೦ | ೫೯ | ೦ | | ಇಲ್ಲಿ ಸ್ಮಾರ್ತರು ಏಕಾದಶಿಯಲ್ಲಿಯೇ ಉಪವಾಸ ಮಾಡಬೇಕೆಂದು ಮಾಧವಾಚಾರ್ಯರ ಮತವಾಗಿದೆ. ಹೇಮಾದ್ರಿ ಮತದಲ್ಲಿ, ಎಲ್ಲರೂ ದ್ವಾದಶಿಯಲ್ಲಿಯೇ |
| ೪ | ಸಮದ್ವಾದಶಿಯುಳ್ಳ ಸಮೈಕಾದಶಿ | ೫೬ | ೧ | ೬೦ | ೦ | ೬೦ | ೦ | | |
| | | ೫೭ | ೦ | ೫೮ | ೦ | ೫೯ | ೦ | | |
| ೫ | ಅಧಿಕ ದ್ವಾದಶಿಯುಳ್ಳ ನ್ಯೂನೈಕಾದಶಿ | ೫೬ | ೧ | ೫೯ | ೫೯ | ೬೦ | ೧ | ಇವೆರಡೂ ದ್ವಾದಶಿ ಮಾತ್ರ ಅಧಿಕ ವಿದ್ಧೈಕಾದಶಿ ಭೇದ | ಉಪವಾಸ ಮಾಡಬೇಕೆಂತ ಹೇಳಿದೆ ಮತ್ತೆ ಕೆಲವರು, ಮೋಕ್ಷಾಪೇಕ್ಷಿಗಳಾದ ಸ್ಮಾರ್ತರು ಪರದಿನದಲ್ಲಿ ಮಾಡಬೇಕೆಂತ ಹೇಳುತ್ತಾರೆ |
| | | ೫೮ | ೦ | ೫೯ | ೦ | ೬೦ | ೦ | | |
| ೬ | ದ್ವಾದಶಿ ಅಧಿಕವಾದ ಸಮೈಕಾದಶಿಯು | ೫೬ | ೧ | ೬೦ | ೦ | ೬೦ | ೧ | | |
| | | ೫೮ | ೦ | ೫೯ | ೦ | ೬೦ | ೧ | | ಇಲ್ಲಿ, ಸ್ಮಾರ್ತಗೃಹಿಗಳು ಏಕಾದಶಿಯಲ್ಲಿಯೂ, |
| ೭ | ನ್ಯೂನ ದ್ವಾದಶಿಯುಳ್ಳ ಅಧಿಕೈಕಾದಶಿಯು | ೫೬ | ೧ | ೬೦ | ೧ | ೫೯ | ೫೮ | ಇವೆರಡೂ ಏಕಾದಶಿ ಮಾತ್ರ ಅಧಿಕ ವಿದ್ಧೈಕಾದಶಿ ಭೇದ | ಸ್ಮಾರ್ತ ಯತಿಗಳೂ ನಿಷ್ಕಾಮ ಗೃಹಿಗಳೂ ವಾನಪ್ರಸ್ಥರೂ ವಿಧವೆಯರೂ ವೈಷ್ಣವರೂ ಸಹಾ ಎರಡನೆಯದರಲ್ಲಿಯೂ ಉಪವಾಸ ಮಾಡಬೇಕು, ವಿಷ್ಣುಪ್ರೀತಿಕಾಮರಾದ ಸ್ಮಾರ್ತರು ಎರಡು ದಿನಗಳಲ್ಲಿಯೂ ಮಾಡಬೇಕೆಂದು ಕೆಲವರು ಹೇಳುವರು. |
| | | ೫೮ | ೦ | ೬೦ | ೦ | ೫೮ | ಕ್ಷ | | |
| ೮ | ಸಮದ್ವಾದಶಿಯುಳ್ಳ ಅಧಿಕೈಕಾದಶಿ | ೫೬ | ೧ | ೬೦ | ೧ | ೬೦ | ೦ | | |
| | | ೫೮ | ೦ | ೬೦ | ೧ | ೫೮ | ಕ್ಷ | | |
| ೯ | ಅಧಿಕದ್ವಾದಶಿಯುಳ್ಳ ಅಧಿಕೈಕಾದಶಿ | ೫೬ | ೧ | ೬೦ | ೧ | ೬೦ | ೧ | ಇವು ಉಭಯಾಧಿಕ ವಿದ್ಧೈಕಾದಶಿ | ಇಲ್ಲಿ ಸ್ಮಾರ್ತರೂ ವೈಷ್ಣವರೂ ಸಹ ಮುಕ್ಕ ಎರಡನೆಯ ಏಕಾದಶಿಯಲ್ಲಿಯೇ ಉಪವಾಸ ಮಾಡಬೇಕು. |
| | | ೫೮ | ೦ | ೬೦ | ೧ | ೪ | ೦ | | |

| | ಧರ್ಮಾಬ್ಧಿಯ ಹೆಸರು. | ದಶಮಿ ಘ | ದಶಮಿ ಪ | ಏ. ದಶಿ ಘ | ಏ. ದಶಿ ಪ | ದ್ವಾದಶಿ ಘ | ದ್ವಾದಶಿ ಪ | ಈ ಗ್ರಂಥದಲ್ಲಿಹಿಂದೆ ಉದಹರಿಸಿದಹೆಸರು | ಆಚರಣೆ. |
|---|---|---|---|---|---|---|---|---|---|
| ೧ | ನ್ಯೂನದ್ವಾದಶಿಯುಳ್ಳ ವಿದ್ಧವಾದ ನ್ಯೂನೈಕಾದಶಿ | ೬೦ | ೧ | ೫೯ | ೫೮ | ೫೯ | ೫೯ | ಈ ನಾಲ್ಕೂ ಎರಡೂ ಅಧಿಕ ಪ್ರಕಾರದ ವಿದ್ಧೈಕಾದಶೀ ಭೇದಗಳಿವೆ. | ಇಲ್ಲಿ ಸ್ಮಾರ್ತರು ಏಕಾದಶಿಯಲ್ಲಿಯೂ ವೈಷ್ಣವರು ದ್ವಾದಶಿಯಲ್ಲಿಯೂ ಉಪವಾಸ ಮಾಡಬೇಕು. |
| | | ೨ | ೦ | ೫೬ | [illegible] | ೫೫ | ೦ | | |
| ೨ | ಸಮದ್ವಾದಶಿಯುಳ್ಳ ನ್ಯೂನೈಕಾದಶಿ | ೬೦ | ೧ | ೫೯ | ೫೮ | ೬೦ | ೦ | | |
| | | ೨ | ೦ | ೫೬ | [illegible] | ೫೫ | ೦ | | |
| ೩ | ನ್ಯೂನದ್ವಾದಶಿಯುಳ್ಳ ಸಮೈಕಾದಶಿ | ೬೦ | ೧ | ೫೯ | ೫೯ | ೫೯ | ೫೯ | | |
| | | ೨ | ೦ | ೫೬ | [illegible] | ೫೫ | ೦ | | |
| ೪ | ಸಮದ್ವಾದಶಿಯುಳ್ಳ ಸಮೈಕಾದಶಿ | ೬೦ | ೧ | ೫೯ | ೫೯ | ೬೦ | ೦ | | |
| | | ೨ | ೦ | ೫೬ | [illegible] | ೫೫ | ೦ | | |
| ೫ | ಅಧಿಕ ದ್ವಾದಶಿಯುಳ್ಳ ನ್ಯೂನೈಕಾದಶಿ | ೬೦ | ೧ | ೫೯ | ೫೮ | ೬೦ | ೧ | ಇವೆರಡೂ ದ್ವಾದಶಿ ಮಾತ್ರ ಅಧಿಕವಾದ ವಿದ್ಧೈಕಾದಶೀ ಭೇದ | ಇಲ್ಲಿ ವಿದ್ಧವಾಗಿರೋಣದರಿಂದ ಸ್ಮಾರ್ತರಿಗೂ ದ್ವಾದಶಿಯಲ್ಲಿಯೇ ಉಪವಾಸವು. |
| | | ೧ | ೦ | ೫೮ | [illegible] | ೬೦ | ೧ | | |
| ೬ | ಅಧಿಕ ದ್ವಾದಶಿಯುಳ್ಳ ಸಮೈಕಾದಶಿ | ೬೦ | ೧ | ೫೯ | ೫೯ | ೬೦ | ೧ | | |
| | | ೧ | ೦ | ೫೮ | [illegible] | ೬೦ | ೧ | | |
| ೭ | ನ್ಯೂನದ್ವಾದಶಿಯುಳ್ಳ ಅಧಿಕೈಕಾದಶಿ | ೬೦ | ೧ | ೬೦ | ೦ | ೫೯ | ೫೮ | ಇವೆರಡೂ ಏಕಾದಶಿ ಮಾತ್ರ ಅಧಿಕ ವಿದ್ಧೈಕಾದಶಿ ಭೇದ | ಇಲ್ಲಿ ಸ್ಮಾರ್ತ ಗೃಹಸ್ಥರು ಮೊದಲಿನ ಏಕಾದಶಿಯಲ್ಲಿಯೂ ಸ್ಮಾರ್ತ ಯತಿಗಳೇ ಮೊದಲಾದವರೂ ವೈಷ್ಣವರೂ ಎರಡನೆಯದರಲ್ಲಿಯೂ ಉಪವಾಸ ಮಾಡಬೇಕು, ವಿಷ್ಣುಪ್ರೀತಿಯನ್ನು ಬಯಸುವವರು ಎರಡೂ ಉಪವಾಸಗಳನ್ನು ಮಾಡಬೇಕೆಂದೂ ಕೆಲವರು ಹೇಳುವರು. |
| | | ೪ | ೦ | ೨ | ೦ | ೫೮ | [illegible] | | |
| ೮ | ಸಮದ್ವಾದಶಿಯುಳ್ಳ ಅಧಿಕೈಕಾದಶಿ | ೬೦ | ೧ | ೬೦ | ೦ | ೫೯ | ೫೯ | | |
| | | ೪ | ೦ | ೨ | ೦ | ೫೮ | [illegible] | | |
| ೯ | ಅಧಿಕ ದ್ವಾದಶಿಯುಳ್ಳ ಅಧಿಕೈಕಾದಶಿ | ೬೦ | ೧ | ೬೦ | ೧ | ೬೦ | ೧ | ಇವು ಎರಡೂ ಅಧಿಕ ವಿದ್ಧೈಕಾದಶಿ | ಇಲ್ಲಿ ಸ್ಮಾರ್ತರೂ ವೈಷ್ಣವರೂ ಕೂಡ ಎರಡನೆಯ ಏಕಾದಶಿಯಲ್ಲಿಯೇ ಉಪವಾಸ ಮಾಡಬೇಕು. |
| | | ೨ | ೦ | ೩ | ೦ | ೪ | ೦ | | |

[ ೨೫ ]

## ವ್ರತಾದಿಗಳ ಸಂಕ್ಷೇಪ ನಿರ್ಣಯ.

ಜಯಂತೀವ್ರತದಂತೆ,ಮಾಡದೇಬಿಟ್ಟರೆ ಪ್ರತ್ಯವಾಯವೂ, ಮಾಡುವದರಲ್ಲಿ ಐಶ್ವರ್ಯವೇಮೊದಲಾದ ಫಲಪ್ರಾಪ್ತಿಯೂ ಉಂಟೆಂದು ತಿಳಿಯುವದರಿಂದ ಏಕಾದಶೀವ್ರತವು ನಿತ್ಯವೂ ಕಾಮ್ಯವೂ ಕೂಡ ಆಗಿರುತ್ತೆ. ಇಲ್ಲಿ ಏಕಾದಶಿಗೆ ಅರುಣೋದಯ ವೇಧೆ ಎಂತಲೂ ಸೂರ್ಯೋದಯ ವೇಧೆ ಎಂತಲೂ ಎರಡು ದಶಮೀವೇಧೆಗಳುಂಟು ಅರುಣೋದಯಕ್ಕೆ ದಶಮೀ ವೇಧೆಯು ವೈಷ್ಣವರಿಗೆಂದೂ, ಸೂರ್ಯೋದಯಕ್ಕೆ ದಶಮೀವೇಧೆಯು ಸ್ಮಾರ್ತರಿಗೆಂದೂ ತಿಳಿಯಬೇಕು. ಅರುಣೋದಯವು ೫೬ಘಳಿಗೆಯ ಮೇಲೆಂದು ತಿಳಿಯಬೇಕು. ಸೂರ್ಯೋದಯವು ಸ್ಪಷ್ಟವಾಗಿದೆ (ಅಂದರೆ ೬೦ಘಳಿಗೆಯ ಮೇಲೆ) 'ವೈಷ್ಣವರು ಸ್ಮಾರ್ತರೆಂಬುವದು ಅವರವರ ವಂಶಪಾರಂಪರ್ಯವಾಗಿ ನಡೆದು ಬಂದು ಪ್ರಸಿದ್ಧವಾಗಿಯೇ ಇದೆ' ಎಂದು ದೊಡ್ಡವರು ಹೇಳುತ್ತಾರೆ. ಆದುದರಿಂದ ಅದನ್ನೇ ಪರಿಗ್ರಹಿಸಬೇಕು. ವೈಷ್ಣವರು ಅರುಣೋದಯಕ್ಕೆ ದಶಮೀ ವೇಧೆಯುಳ್ಳ ಏಕಾದಶಿಯನ್ನು ಬಿಟ್ಟು, ದ್ವಾದಶಿಯಲ್ಲಿ ಉಪವಾಸ ಮಾಡಬೇಕು; ಏಕಾದಶಿ ದ್ವಾದಶಿಗಳೆರಡೂ ಅಧಿಕವಾದಾಗಲೂ ಅಂದರೆ ಸೂರ್ಯೋದಯಾನಂತರದಲ್ಲಿಯೂ ಇದ್ದಲ್ಲಿ (ವೇಧೆ ಇಲ್ಲದೆ) ಶುದ್ಧವಾಗಿದ್ದರೂ, ಮೊದಲನೆಯದನ್ನು ಬಿಟ್ಟು ಎರಡನೆಯ ಏಕಾದಶಿಯಲ್ಲಿಯೇ ಉಪವಾಸ ಮಾಡಬೇಕು. ಇದರಂತೆ ಏಕಾದಶಿಯು ಮಾತ್ರ ಹೆಚ್ಚಾಗಿದ್ದಾಗಲೂ, ದ್ವಾದಶಿಯು ಮಾತ್ರ ಹೆಚ್ಚಾಗಿದ್ದಾಗಲೂ ಸಹ, ಶುದ್ಧವಾಗಿದ್ದರೂ ಹಿಂದಿನ ದಿನವನ್ನು ಬಿಟ್ಟು ಪರದಿನವನ್ನು ಸ್ವೀಕರಿಸಬೇಕು.

ಇಲ್ಲಿಗೆ ವೈಷ್ಣವರ ನಿರ್ಣಯವು ಮುಗಿದುದು.

## ಸ್ಮಾರ್ತರಿಗೆ ನಿರ್ಣಯ.

ಏಕಾದಶೀ ದ್ವಾದಶಿಗಳೆರಡೂ ಅಧಿಕವಾದಾಗ ಅಂದರೆ ಪರದಿನದಲ್ಲಿ ಸೂರ್ಯೋದಯಾನಂತರದಲ್ಲಿಯೂ ಇದ್ದರೆ, ಆಗ ಸ್ಮಾರ್ತರು ಮೊದಲಿನ ಏಕಾದಶಿಯು ಶುದ್ಧವಾಗಿದ್ದರೂ ಅದನ್ನು ಬಿಟ್ಟು ಎರಡನೆಯ ಏಕಾದಶಿಯಲ್ಲಿಯೇ ಉಪವಾಸ ಮಾಡಬೇಕು. ಏಕಾದಶಿಯು ಮಾತ್ರ ಅಧಿಕವಾಗಿದ್ದರೆ

ಆಗ ಸ್ಮಾರ್ತಗೃಹಸ್ಥರು ಮೊದಲನೆಯದರಲ್ಲಿಯೂ, ಯತಿಗಳೇ ಮೊದಲಾದವರು ಎರಡನೆಯದರಲ್ಲಿಯೂ ಉಪವಾಸ ಮಾಡಬೇಕು. ದ್ವಾದಶಿ ಮಾತ್ರ ಅಧಿಕವಾಗಿದ್ದರೆ ಶುದ್ಧವೋ, ವಿದ್ಧವೋ ಎಂಬುವದನ್ನು ನೋಡಿಕೊಂಡು ಏಕಾದಶಿಯು ಶುದ್ಧವಾಗಿದ್ದಾದರೆ ಅದರಲ್ಲಿ ಉಪವಾಸ ಮಾಡಬೇಕು. ವಿದ್ಧವಾಗಿದ್ದಾದರೆ ದ್ವಾದಶಿಯಲ್ಲಿಯೇ ಉಪವಾಸ ಮಾಡಬೇಕು. ಒಟ್ಟಿನಲ್ಲಿ ಏಕಾದಶೀ ದ್ವಾದಶಿಗಳೆರಡೂ ಅಧಿಕವಾದಾಗ ಮತ್ತು ದ್ವಾದಶಿಯು ಮಾತ್ರ ಅಧಿಕವಾಗಿದ್ದಾಗ ಹೊರತು, ಇನ್ಯಾವ ಸಂದರ್ಭದಲ್ಲಿಯೂ ವಿದ್ಧೈಕಾದಶಿಯನ್ನು ಸ್ಮಾರ್ತರು ಬಿಡಬೇಕಾದುದಿಲ್ಲ

ಇಲ್ಲಿಗೆ ಸ್ಮಾರ್ತರ ನಿರ್ಣಯು ಮುಗಿದುದು.

---

## [ ೨೬ ]
## ವೇಧೆಯ ಭೇದಗಳು.

ಅರ್ಧರಾತ್ರಿಯ ಮೇಲೆ ದಶಮಿ ವೇಧೆಯಿದ್ದರೆ, ಅದಕ್ಕೆ ಕಪಾಲ ವೇಧೆಎಂತಲೂ, ದಶಮಿಯು ೫೨ ಘಳಿಗೆ ಇದ್ದರೆ ಅದಕ್ಕೆ ಛಾಯಾ ವೇಧೆ ಎಂತಲೂ, ದಶಮಿಯು ೫೩ ಘಳಿಗೆಯಿದ್ದರೆ ಗ್ರಸ್ತವೇಧೆಯೆಂತಲೂ, ದಶಮಿಯು ೫೪ ಘಳಿಗೆಯಿದ್ದರೆ ಸಂಪೂರ್ಣವೇಧೆಯೆಂತಲೂ ೫೫ ಘಳಿಗೆಯಿದ್ದರೆ, ವೇಧೆಯೆಂತಲೂ, ೫೬ ಘಳಿಗೆಯಿದ್ದರೆ, ಮಹಾವೇಧೆಯೆಂತಲೂ, ೫೭ಘಳಿಗೆಯಿದ್ದರೆ, ಪ್ರಳಯವೆಂತಲೂ, ೫೮ಘಳಿಗೆಯಿದ್ದರೆ ಮಹಾಪ್ರಳಯವೆಂತಲೂ, ೫೯ ಘಳಿಗೆಯಿದ್ದರೆ ಘೋರವೆಂತಲೂ, ೬೦ಘಳಿಗೆಯಿದ್ದರೆ, ರಾಕ್ಷಸವೆಂತಲೂ ನಾರದರು ಹೇಳಿದ (ಮೇಲ್ಕಂಡ) ವೇಧಭೇದಗಳಲ್ಲಿ ಮಾಧ್ವರೇ ಮೊದಲಾದವರಲ್ಲಿ ಕೆಲವರು ಮಾತ್ರ ಕೆಲವು ವೇಧೆಗಳನ್ನು ಮಾತ್ರ ಅನುಸರಿಸುತ್ತಿರುವರು. ಮಾಧವಾಚಾರ್ಯರೇ ಮೊದಲಾದ ಸರ್ವಸಮ್ಮತವಾದ (ಅರುಣೋದಯ) ವೇಧೆಯು ೫೬ಘಳಿಗೆಯ ಮೇಲೆ ಇರುವದೆಂದು ತಿಳಿಯತಕ್ಕದ್ದು.

'ದಶಮೀಪಂಚದಶಘಟೀಭಿರೇಕಾದಶೀ ದೂಷಿತಾ ' ದಶಮಿಯು೧೫ ಗಳಿಗೆಗಳಿಂದ ಏಕಾದಶಿಯನ್ನು ದೂಷಿಸುವದು' ಎಂಬ ವಚನವೋ ಅಂದರೆ

ಅದು ಉಪವಾಸವ್ರತವಲ್ಲದ ಬೇರೆ ವ್ರತದಲ್ಲಿಯೂ, ವ್ರತಾಂಗವಾದ ಸಂಕಲ್ಪಪೂಜಾದಿಗಳಲ್ಲಿಯೂ ಅನ್ವಯಿಸುತ್ತದೆ. ಅದರಲ್ಲಿಯೂ ಆ ದೋಷದಿಂದ ಸರ್ವಥಾ ಬಿಟ್ಟೇ ಬಿಡಬೇಕೆಂದು ತಿಳಿಯಬಾರದು; ಆದರೆ ಪ್ರಾತಃಕಾಲದಲ್ಲಿ ಮಾಡಬೇಕಾದ ಸಂಕಲ್ಪ ಪೂಜಾದಿಗಳನ್ನು ಮಧ್ಯಾಹ್ನದ ಮೇಲೆ ಮಾಡಬೇಕೆಂದು ತಿಳಿಯತಕ್ಕದ್ದು.

[ ೨೭ ]

## ವ್ರತಪ್ರಯೋಗ.

ಉಪವಾಸ ಮಾಡಬೇಕಾದ ಹಿಂದಿನ ದಿನದ ಪ್ರಾತಃಕಾಲದಲ್ಲಿಯೇ ವ್ರತವನ್ನು ಮಾಡುವದಾಗಿ ನಿಶ್ಚಯಿಸಿಕೊಂಡು 'ದಶಮೀ ದಿನಮಾರಭ್ಯ ಕರಿಷ್ಯೇಹಂ ವ್ರತಂತವ || ತ್ರಿದಿನಂ ದೇವದೇವೇಶ ನಿರ್ವಿಘ್ನಂಕುರುಕೇಶವ' ಸಕಲ ದೇವತೆಗಳಿಗೂ ಅಧಿದೇವತೆಯಾದ ಎಲೈ ವಿಷ್ಣುವೇ! ದಶಮಿಯನ್ನು ಮೊದಲು ಮಾಡಿಕೊಂಡು ಮೂರು ದಿವಸಗಳು ನಿನ್ನ ವ್ರತವನ್ನು ನಾನು ಮಾಡುವೆನು. ಎಲೈ ಸ್ವಾಮಿಯೇ! ಈ ವ್ರತವು ನಿರ್ವಿಘ್ನವಾಗಿ ನೆರವೇರುವಂತೆ ಅನುಗ್ರಹಿಸುವನಾಗು' ಎಂಬೀ ಮಂತ್ರದಿಂದ ಸಂಕಲ್ಪ ಮಾಡಿ, ಆ ದಿನ ಮಧ್ಯಾಹ್ನದಲ್ಲಿ ಏಕಭಕ್ತವನ್ನು ಮಾಡಬೇಕು. ಇದರಲ್ಲಿ ನಡೆಸಬೇಕಾದ ನಿಯಮಗಳು:—ಕಂಚಿನಪಾತ್ರೆ, ಕಿರುಗಡಲೆ, ಹಗಲುನಿದ್ರೆ, ಅತಿಭೋಜನ, ಅತಿಜಲಪಾನ, ಪುನರ್ಭೋಜನ, ಮೈಥುನ, ಜೇನುತುಪ್ಪ, ಸುಳ್ಳಾಡುವದು, ಕಡಲೆ, ಹಾರಕ, ಕಾಯಿಪಲ್ಯೆಗಳು, ಪರಾನ್ನ, ದ್ಯೂತ, ಯುಗ್ಮೆ, ಎಳ್ಳುಹುಡಿ, ತಾಂಬೂಲ ಇವುಗಳನ್ನೆಲ್ಲ ಬಿಡಬೇಕು. ಏಕಭಕ್ತಮಾಡಿದ ಮೇಲೆ ಕಾಷ್ಠದಿಂದ ಹಲ್ಲುಗಳನ್ನುಜ್ಜಿಕೊಳ್ಳಬೇಕು. ರಾತ್ರಿಯಲ್ಲಿ ನೆಲದ ಮೇಲೆ ಮಲಗಿದ್ದು, ಬೆಳಗಾದ ಮೇಲೆ ಏಕಾದಶಿಯಲ್ಲಿ ಎಲೆ ಮೊದಲಾದವುಗಳಿಂದ ಹಲ್ಲುಗಳನ್ನುಜ್ಜಿಕೊಳ್ಳಬೇಕು. ದಂತಕಾಷ್ಠದಿಂದ ಉಜ್ಜ*ಬಾರದು.

---

* ಉಪವಾಸ ದಿನದಲ್ಲಿಯೂ, ಶ್ರಾದ್ಧ ದಿನದಲ್ಲಿಯೂ ದಂತಕಾಷ್ಠದಿಂದ ಹಲ್ಲುಗಳನ್ನುಜ್ಜಬಾರದು. ಹಲ್ಲುಗಳಿಗೆ ದಂತಕಾಷ್ಠವನ್ನು ಸೋಕಿಸುವದರಿಂದ ಏಳುಕುಲಗಳೂ ನಾಶವಾಗುವವು. ಇಲ್ಲಿ 'ಕಾಷ್ಠದಿಂದ ಕೂಡದು' ಎಂದು ಹೇಳಿರೋಣದರಿಂದ ಮಣ್ಣು, ಹೆಂಟೆ ಇತ್ಯಾದಿಗಳಿಂದ ಹಲ್ಲು

ಅನಂತರ ಸ್ನಾನವೇ ಮೊದಲಾದ ನಿತ್ಯಕರ್ಮಗಳನ್ನು ಮಾಡಿ, ಪವಿತ್ರವನ್ನಿಟ್ಟುಕೊಂಡು ಉತ್ತರಾಭಿಮುಖನಾಗಿ ನೀರು ತುಂಬಿದ ತಾಮ್ರದಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಂಡು "ಏಕಾದಶ್ಯಾಂನಿರಾಹಾರೋ ಭೂತ್ವಾಹಮಪರೇಹನಿ || ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂಮೇಭವಾಚ್ಯುತ||" ಕಮಲನೇತ್ರನಾದ ಎಲೈ ಸ್ವಾಮಿಯೇ! ನಾನು ಏಕಾದಶಿಯಲ್ಲಿ ಆಹಾರವನ್ನು ತೆಗೆದುಕೊಳ್ಳದೆ ಉಪವಾಸವಿದ್ದು, ನಾಳೇದಿನ ಪಾರಣೆ ಮಾಡುತ್ತೇನೆ. ಎಲೈ ನಾಶರಹಿತನಾದ ವಿಷ್ಣುವೇ! ನನಗೆ ರಕ್ಷಕನಾಗು ಎಂಬೀ ಮಂತ್ರದಿಂದ ಸಂಕಲ್ಪ ಮಾಡಬೇಕು. ಅಥವಾ ಈ ಮಂತ್ರವನ್ನು ಹೇಳಿ ಬೊಗಸೆಯಿಂದ ಹುವ್ವುಗಳನ್ನು ದೇವರ ಮೇಲೆ ಎರಚಬೇಕು. ಉಪವಾಸ ಮಾಡುವದಕ್ಕೆ ಶಕ್ತಿಯಿಲ್ಲದವನು ತನ್ನ ಶಕ್ತಿಯನ್ನನುಸರಿಸಿ, ತಾನು ಯಾವುದನ್ನು ಮಾಡಬೇಕೆಂದಿರುವನೋ ಅದಕ್ಕೆ ಸರಿಯಾಗಿ 'ಏಕಾದಶ್ಯಾಂಜಲಾಹಾರಃ' ಅಥವಾ 'ಏಕಾದಶ್ಯಾಂ ಕ್ಷೀರ ಭಕ್ಷಿ' 'ಏಕಾದಶ್ಯಾಂ ಫಲಾಹಾರಃ' 'ಏಕಾದಶ್ಯಾ ನಕ್ತಭೋಜೀ' 'ಏಕಾದಶಿಯಲ್ಲಿ ಜಲಪಾನ ಮಾಡಿಕೊಂಡಿರುತ್ತೇನೆ ಎಂದಾಗಲಿ', ಕ್ಷೀರಪಾನ ಮಾಡಿಕೊಂಡಿರುತ್ತೇನೆ ಎಂದಾಗಲೀ, ಹಣ್ಣುಗಳನ್ನು ತಿಂದುಕೊಂಡಿರುತ್ತೇನೆ ಎಂದಾಗಲೀ, ನಕ್ತಭೋಜನ ಮಾಡುತ್ತೇನೆ ಎಂದಾಗಲೀ ಯಾವದಾದರೊಂದನ್ನು ಮಂತ್ರದಲ್ಲಿ ಬದಲಾಯಿಸಿಕೊಂಡು ಸಂಕಲ್ಪಮಾಡಬೇಕು. ಶೈವರು ರುದ್ರಗಾಯತ್ರಿಯಿಂದ ಸಂಕಲ್ಪ ಮಾಡಬೇಕು. ಸೂರ್ಯಾರಾಧಕರು, ನಿತ್ಯಗಾಯತ್ರಿಯಿಂದಾಗಲೀ ನಾಮಮಂತ್ರದಿಂದಾಗಲಿ ಸಂಕಲ್ಪ ಮಾಡಬೇಕು. ಸೂರ್ಯೋದಯಾನಂತರ ದಶಮಿ ಇದ್ದರೆ, ಸ್ಮಾರ್ತರು ಈ ಸಂಕಲ್ಪವನ್ನು ಏಕಾದಶಿಯ ರಾತ್ರಿಯಲ್ಲಿ ಮಾಡಬೇಕು. ಅರ್ಧ * ರಾತ್ರಿಯಮೇಲೆ ದಶಮಿಯು ಇದ್ದರೆ ಎಲ್ಲರೂ ಏಕಾದಶಿಯ

---

ಗಳನ್ನುಜ್ಜುವದು ನಿಷೇಧವಲ್ಲವೆಂದು ಹೇಮಾದ್ರಿಯಲ್ಲಿ ಹೇಳಿದೆ. ಶ್ರಾದ್ಧದಿನದಲ್ಲಿಯೂ, ಉಪವಾಸದಿನದಲ್ಲಿಯೂ ಕಾಷ್ಠದಿಂದ ಹಲ್ಲುಗಳನ್ನುಜ್ಜಿದರೆ ನೂರು ಸಾರಿ ಗಾಯತ್ರಿಜಪದಿಂದ ಶುದ್ಧವಾದ ಉದಕಪಾತ್ರಶನೆಯಿಂದ ಶುದ್ಧನಾಗುತ್ತಾನೆಂದು ಸಿಂಧುಕಾರರು ಹೇಳುತ್ತಾರೆ.

* ದಶಮ್ಯಾಸ್ಸಂಗ ದೋಷೇಣ ಅರ್ಧರಾತ್ರಾತ್ಪರೇಣತು || ವರ್ಜಯೇಚ್ಚತುರೋಯಾಮಾನ್ ಸಂಕಲ್ಪಾರ್ಚನಯೋಸ್ತದಾ || ದಶಮಿಯ ಸಂಗ

ಮಧ್ಯಾಹ್ನದ ಮೇಲೆ ಸಂಕಲ್ಪಮಾಡಬೇಕು. ಸಂಕಲ್ಪಾನಂತರದಲ್ಲಿ ಅಷ್ಟಾಕ್ಷರೀಮಂತ್ರದಿಂದ ಮೂರು ಸಾರಿ ಅಭಿಮಂತ್ರಿತವಾದ ಜಲವನ್ನು ಪಾನ ಮಾಡಬೇಕು. ಅನಂತರ ಹುವ್ವಿನಮಂಟಪವನ್ನು ಮಾಡಿ, ಉತ್ತಮವಾದ ಹುವ್ವು, ಗಂಧ, ಧೂಪ, ದೀಪ, ನೈವೇದ್ಯಗಳಿಂದಲೂ ನಾನಾವಿಧವಾದ ಸ್ತೋತ್ರಗಳಿಂದಲೂ ಮನೋಹರಗಳಾದ ಗೀತವಾದ್ಯಗಳಿಂದಲೂ, ದಂಡವತ್‌ನಮಸ್ಕಾರಗಳಿಂದಲೂ ಉತ್ತಮವಾದ ಜಯಶಬ್ದಗಳಿಂದಲೂ, ಯಥಾವಿಧಿಯಾಗಿ ಶ್ರೀಹರಿಯನ್ನು ಪೂಜಿಸಿ ರಾತ್ರಿಯಲ್ಲಿ ಜಾಗರಣೆ ಮಾಡಬೇಕು.

## ಏಕಾದಶಿಯಲ್ಲಿ ನಡೆಸಬೇಕಾದ ನಿಯಮಗಳು.

ಪಾಷಂಡಾದಿ‡ಗಳೊಡನೆ ಮಾತನಾಡುವದೂ, ಅವರನ್ನು ಮುಟ್ಟುವದೂ, ಅವರನ್ನು ನೋಡುವದೂ ಇವುಗಳನ್ನು ಬಿಡಬೇಕು. ಬ್ರಹ್ಮಚರ್ಯ, ಸತ್ಯವಾಗಿ ಮಾತನಾಡೋಣ, ಹಗಲು ಮಲಗದೆ ಇರುವದು ಇತ್ಯಾದಿಗಳೂ ಮತ್ತು ಪರಿಭಾಷಾಪ್ರಕರಣದಲ್ಲಿ ಹೇಳಿದವುಗಳೂ ಸಹಾ ನಡೆಸಬೇಕಾದ ನಿಯಮಗಳಾಗಿವೆ. ಪಾಷಂಡ, ಚಂಡಾಲ, ರಜಸ್ವಲಾದಿಗಳ ದರ್ಶನ ಮೊದಲಾದವುಗಳಲ್ಲಿ ಸೂರ್ಯಾವಲೋಕನದಿಂದ ಶುದ್ಧನಾಗುತ್ತಾನೆ. ಅವರುಗಳ ಸ್ಪರ್ಶವಾದರೆ, ಸ್ನಾನಮಾಡಿ ಸೂರ್ಯದರ್ಶನದಿಂದ ಶುದ್ಧನಾಗುವನು. ಅವರೊಡನೆ ಸಂಭಾಷಣೆಯೊದಗಿದರೆ, ಅಗ್ನಿಯನ್ನೂ, ಅಚ್ಯುತನನ್ನೂ ಧ್ಯಾನಮಾಡಬೇಕು, ಇವೇ ಮೊದಲಾದವುಗಳು ಪ್ರಾಯಶ್ಚಿತ್ತವಾಗಿವೆ.

ಉಪವಾಸ ದಿನದಲ್ಲಿ ಶ್ರಾದ್ಧವೇ ಮೊದಲಾದವುಗಳು ಬಂದರೆ, ನಿರ್ಣಯ:—ಉಪವಾಸ ದಿನದಲ್ಲಿ ಶ್ರಾದ್ಧವು ಬಂದರೆ ಶ್ರಾದ್ಧವಾದ ಮೇಲೆ ಅವಶಿಷ್ಟವಾದ ಎಲ್ಲ ಪದಾರ್ಥಗಳನ್ನೂ ಒಂದು ಪಾತ್ರೆಗೆ ಬಡಿಸಿ, ಅದನ್ನು ಮೂಸಿ ನೋಡಿ ಆ ಅನ್ನವನ್ನು ಗೋವಿಗಿಡಬೇಕು, ಕಂದಮೂಲಫಲಾದಿ

---

ವೆಂಬ ದೋಷವು. ಅರ್ಧರಾತ್ರ್ಯಾನಂತರದಲ್ಲಿ ಏಕಾದಶಿಗೆ ಉಂಟಾದರೆ ಸಂಕಲ್ಪಮತ್ತು ಪೂಜೆಗಳನ್ನು ನಾಲ್ಕುಯಾಮ ಮಾಡಬಾರದು ಎಂದು ನಿರ್ಣಯಸಿಂಧುವಿನಲ್ಲಿ ಹೇಳಿದೆ.

‡ ಆದಿಶಬ್ದದಿಂದ ರಜಸ್ವಲೆ, ಚಂಡಾಲ, ರಜಕ, ಹೆತ್ತಬಾಣಂತಿ ಇವರೇ ಮೊದಲಾದವರ ಶಬ್ದಶ್ರವಣ, ಸಂಭಾಷಣ, ಸ್ಪರ್ಶ ಇವುಗಳನ್ನು ಮಾಡಬಾರದು.

ಗಳನ್ನು ಆಹಾರವಾಗಿ ತೆಗೆದುಕೊಂಡು, ಅನುಕಲ್ಪವಾಗಿ ಉಪವಾಸವನ್ನು ಮಾಡತಕ್ಕವನು ತಾನು ತೆಗೆದುಕೊಳ್ಳತಕ್ಕವುಗಳಾದ ಫಲಾದಿಗಳನ್ನೂ, ನಿಮಂತ್ರಿತರಾದ ಬ್ರಾಹ್ಮಣರ ಪಾತ್ರೆಗಳಿಗೂ ಬಡಿಸಿ ಶ್ರಾದ್ಧಾನಂತರ ಮಿಕ್ಕ ಆ ಫಲಾದಿಗಳನ್ನು ತೆಗೆದುಕೊಳ್ಳಬೇಕು. 'ಯಾವತ್ತಾದರೂ ಏಕಾದಶಿ ದಿವಸ ಮೃತತಿಥಿಯು ಬಂದರೆ ಆ ದಿನವನ್ನು ಬಿಟ್ಟು ದ್ವಾದಶಿಯಲ್ಲಿ ಶ್ರಾದ್ಧ ಮಾಡಬೇಕೆಂಬಿವೇ ಮೊದಲಾದ ವಚನಗಳು ವೈಷ್ಣವರ ಪರವಾದವುಗಳು. ವೈಷ್ಣವರು ಷೋಡಶ ಮಹಾಲಯಗಳನ್ನೂ ಮಾಡುವ ಪಕ್ಷದಲ್ಲಿ ಏಕಾದಶಿಯಲ್ಲಿ ಮಾಡಬೇಕಾದುದನ್ನೂ, ದ್ವಾದಶಿಯಲ್ಲಿ ಮಾಡಬೇಕಾದುದನ್ನೂ ಒಟ್ಟಾಗಿ ಸಮಾನ ತಂತ್ರದಿಂದ ಮಾಡುತ್ತೇನೆಂದು ಸಂಕಲ್ಪಮಾಡಿ ದ್ವಾದಶಿಯಲ್ಲಿ ಎರಡು ಮಹಾಲಯಗಳನ್ನೂ ಮಾಡಬೇಕು.

ಕಾಮ್ಯೋಪವಾಸದಲ್ಲಿ ಜಾತಾಶೌಚವು ಬಂದರೆ, ಶಾರೀರ ನಿಯಮಗಳನ್ನು ಆ ದಿನ ತಾನೇ ಮಾಡಿ, ಸೂತಕವು ತೀರಿದ ಮೇಲೆ ಪೂಜೆ ಬ್ರಾಹ್ಮಣ ಭೋಜನ ಮುಂತಾದವುಗಳನ್ನು ನಡಿಸಬೇಕು.

ಉಪವಾಸವು ನಿತ್ಯವಾದದ್ದಾಗಿದ್ದು, ಅದರಲ್ಲಿ ಸೂತಕವು ಬಂದರೆ, ಸ್ನಾನ ಮಾಡಿ ಶ್ರೀ ಹರಿಗೆ ನಮಸ್ಕರಿಸಿ ಉಪವಾಸವೇ ಮೊದಲಾದವುಗಳನ್ನು ತಾನು ಮಾಡಿ, ಪೂಜಾದಿಗಳನ್ನು ಬ್ರಾಹ್ಮಣನ ಮೂಲಕ ಮಾಡಿಸಬೇಕು. ದಾನಾದಿಗಳನ್ನು ಬಿಟ್ಟೇ ಬಿಡುವದು. ಸೂತಕ ತೀರಿದ ಮೇಲೂ ಮಾಡಬೇಕಾದ ಅವಶ್ಯಕತೆ ಇಲ್ಲ ಸ್ತ್ರೀಯರಿಗೆ ರಜಸ್ವಲೆಯರಾಗಿ ವಿಘ್ನ ಬಂದರೆ ಅವರೂ ಹೀಗೆಯೇ ಮಾಡತಕ್ಕದ್ದು. (ಹೀಗೆ ಏಕಾದಶಿಯು ಕಳೆದಮೇಲೆ) ದ್ವಾದಶಿಯ ಪ್ರಾತಃಕಾಲದಲ್ಲಿ ನಿತ್ಯ ಪೂಜೆಯನ್ನು ಮಾಡಿ ವ್ರತವನ್ನು "ಅಜ್ಞಾನ ತಿಮಿರಾಂಧಸ್ಯ ವ್ರತೇನಾನೇನ ಕೇಶವ ಪ್ರಸೀದ ಸುಮುಖೋ ನಾಥ ಜ್ಞಾನದೃಷ್ಟಿಪ್ರದೋಭವ ||

"ಎಲೈ ಸ್ವಾಮಿ ಶ್ರೀ ಹರಿಯೇ! ನಾನು ಮಾಡಿದ ಈ ವ್ರತದಿಂದ ನೀನು ಸುಮುಖನಾಗಿ, ಅಜ್ಞಾನವೆಂಬ ತಿಮಿರ ರೋಗದಿಂದ ಕುರುಡನಾಗಿರುವ ನನಗೆ ಜ್ಞಾನವೆಂಬ ದೃಷ್ಟಿಯನ್ನು ಕೊಡುವವನಾಗು" ಎಂಬೀ ಮಂತ್ರದಿಂದ ವ್ರತವನ್ನು ಭಗವಂತನಿಗೆ ಅರ್ಪಣೆ ಮಾಡಬೇಕು. ದಶಮಿಯೇ ಮೊದಲಾದವುಗಳಲ್ಲಿ ಹೇಳಿರುವ ನಿಯಮಗಳು ತಪ್ಪಿ ಹೋದರೆ, ಅಂದರೆ,

ಹಗಲು ನಿದ್ರೆ ಮಾಡಿದರೇ ಆಗಲೀ ಅನೇಕಸಾರಿ ನೀರು ಕುಡಿದರೇ ಆಗಲೀ ಸುಳ್ಳಾಡಿದರೇ ಆಗಲೀ ಕೆಟ್ಟು ಹೋದ ಆಯಾಯ ನಿಯಮಗಳನ್ನುದ್ದೇಶಿಸಿ ನೂರೆಂಟು ಸಾರಿ ನಾರಾಯಣಾಷ್ಟಾಕ್ಷರ ಮಂತ್ರವನ್ನು ಜಪಿಸಬೇಕು. ದೋಷವು ಸ್ವಲ್ಪವಾಗಿದ್ದರೆ ಹರಿನಾಮವನ್ನು ಮುನ್ನೂರು ಸಾರೆ ಜಪಿಸಬೇಕು. ವ್ರತದ ಮಧ್ಯದಲ್ಲಿ ರಜಸ್ವಲೆಯರು, ಚಂಡಾಲರು, ಅಗಸರು, ಹರಿಗೆಯವರು ಇವರೇ ಮೊದಲಾದವರ ಶಬ್ದವನ್ನು ಕೇಳಿದರೆ ೧೦೦೮ ಸಾರಿ ಗಾಯಿತ್ರಿಯನ್ನು ಜಪಿಸಬೇಕು.

ಅನಂತರ ದೇವರಿಗೆ ನೈವೇದ್ಯಮಾಡಿದ ತುಳಸೀ ಮಿಶ್ರವಾದ ಅನ್ನದಿಂದ ಪಾರಣೆಯನ್ನು ಮಾಡಬೇಕು. ಪಾರಣೆಯಲ್ಲಿ ನೆಲ್ಲೀಕಾಯನ್ನು ಉಪಯೋಗಿಸುವದರಿಂದ ಮಾತನಾಡಬಾರದವರೊಡನೆ ಮಾತನಾಡಿದ ದೋಷವು ಪರಿಹಾರವಾಗುವದು.

## ಪಾರಣೆಯ ನಿರ್ಣಯ.

ಪಾರಣೆಯನ್ನು ಕೂಡ ದ್ವಾದಶಿಯು ಕಳೆದ ಮೇಲೆ ಮಾಡುವದರಲ್ಲಿ ಮಹಾ ದೋಷವು ಬರುವದರಿಂದ ದ್ವಾದಶಿಯ ಮಧ್ಯದಲ್ಲಿಯೇ ಮಾಡಬೇಕು. ದ್ವಾದಶಿಯು ಸ್ವಲ್ಪವೇ ಇದ್ದರೆ ರಾತ್ರಿಯು ಇನ್ನೂ ಇರುವಾಗಲೇ ಅಂದರೆ ಸೂರ್ಯೋದಯಕ್ಕೆ ಮುಂಚಿತವಾಗಿಯೇ ಮಧ್ಯಾಹ್ನದವರಿಗೂ ನಡಿಯಬೇಕಾದ ಕರ್ಮಗಳನ್ನೆಲ್ಲಾ ಅಪಕರ್ಷಣೆಯಿಂದ ಮಾಡಬೇಕು. ಅಗ್ನಿಹೋತ್ರ ಹೋಮಕರ್ಮಕ್ಕೆ ಅಪಕರ್ಷಣೆ ಇಲ್ಲವೆಂದು ಕೆಲವರು ಹೇಳುವರು. ರಾತ್ರಿಯಲ್ಲಿ ಶ್ರಾದ್ಧವನ್ನು ಮಾಡಕೂಡದೆಂದು ನಿಷೇಧಿಸಿರುವದರಿಂದ ಶ್ರಾದ್ಧಕ್ಕೂ ಹೀಗೆಯೇ ಅಪಕರ್ಷಣೆಯಿಲ್ಲ. ಹೆಚ್ಚುತೊಂದರೆಯು ಒದಗಿದಾಗಲೂ, ಶ್ರಾದ್ಧದಲ್ಲಿಯೂ, ಪ್ರದೋಷಾದಿ ವ್ರತಗಳಲ್ಲಿಯೂ, ತೀರ್ಥೋದಕದಿಂದ ಪಾರಣೆಯನ್ನು ಮಾಡಬೇಕು. ದ್ವಾದಶಿಯು ಹೆಚ್ಚಾಗಿದ್ದಾಗ ಹರಿವಾಸರ ಸಂಜ್ಞೆಯುಳ್ಳ ದ್ವಾದಶಿಯ ಮೊದಲನೆಯ ಪಾದವನ್ನು ಬಿಟ್ಟು ಅಂದರೆ ದ್ವಾದಶಿಯು ಆದ್ಯಂತ ಎಷ್ಟು ಗಳಿಗೆ ಇರುತ್ತೋ ಅದರ ನಾಲ್ಕನೆಯ ಒಂದು ಭಾಗ ಕಳೆದ ಮೇಲೆ, ಪಾರಣೆಯನ್ನು ಮಾಡಬೇಕು. ದ್ವಾದಶಿಯು ಒಂದು ಪಳೆಯೂ ಇಲ್ಲವಾದರೆ, ತ್ರಯೋದಶಿಯಲ್ಲಿ ಪಾರಣೆ ಮಾಡಬೇಕು. ದ್ವಾದಶಿಯು ಮಧ್ಯಾಹ್ನದ

ಮೇಲೂ ಇದ್ದರೆ, ಪ್ರಾತಃಕಾಲದಲ್ಲಿ ಮೂರು ಮುಹೂರ್ತಗಳೊಳಗಾಗಿ ಪಾರಣೆಯನ್ನು ಮಾಡಬೇಕೇ ಹೊರತು, ಮಧ್ಯಾಹ್ನಾದಿಗಳಲ್ಲಿ ಕೂಡದೆಂದು ಬಹು ಜನರು ಹೇಳುತ್ತಾರೆ. ಅನೇಕ ಕರ್ಮಗಳ ಕಾಲಗಳಿಗೆ ಬಾಧೆಯುಂಟಾಗುವದರಿಂದ ಅಪರಾಹ್ಣಾದಿಗಳಲ್ಲಿಯೇ ಮಾಡಬೇಕೆಂದು ಮತ್ತೆ ಕೆಲವರು ಹೇಳುತ್ತಾರೆ ಎಲ್ಲಾ ಮಾಸಗಳಲ್ಲಿಯೂ, ಶುಕ್ಲಪಕ್ಷದಲ್ಲಿಯಾಗಲೀ ಕೃಷ್ಣಪಕ್ಷದಲ್ಲಿಯಾಗಲೀ ದ್ವಾದಶಿಯು ದಿನ ಶ್ರವಣನಕ್ಷತ್ರವು ಬಂದರೆ ಶಕ್ತರಾದವರು ಏಕಾದಶಿ, ದ್ವಾದಶಿ ಈ ಎರಡು ದಿನಗಳಲ್ಲಿಯೂ ಉಪವಾಸ ಮಾಡಬೇಕು. ಅಶಕ್ತರಾದವರು ಫಲಾಹಾರವೇ ಮೊದಲಾದವುಗಳಲ್ಲಿ ಯಾವುದಾದರೊಂದು ಅನುಕಲ್ಪವನ್ನು ಏಕಾದಶಿಯಲ್ಲಿ ಮಾಡಿ ಶ್ರವಣಯುಕ್ತವಾದ ದ್ವಾದಶಿಯಲ್ಲಿ ಉಪವಾಸ ಮಾಡಬೇಕು. ವಿಷ್ಣುಶೃಂಖಲಯೋಗವು ಒದಗಿದರೆ ಶ್ರವಣದ್ವಾದಶೀ ನಿಮಿತ್ತಕವಾದ ಉಪವಾಸವನ್ನೂ ಏಕಾದಶಿಯಲ್ಲಿಯೇ ಮಾಡಿ, ದ್ವಾದಶಿಯಲ್ಲಿ ಶ್ರವಣ ನಕ್ಷತ್ರವು ಕಳೆದ ಮೇಲೆ ಪಾರಣೆ ಮಾಡಬೇಕು. ದ್ವಾದಶಿಯು ಶ್ರವಣಕ್ಕಿಂತಲೂ ಕಡಿಮೆಯಾಗಿದ್ದರೆ ದ್ವಾದಶಿ ಕಳೆದಮೇಲೆ ಪಾರಣೆ ಮಾಡುವದು ದೋಷವೆಂದು ಹೇಳಿರೋಣದರಿಂದ, ಶ್ರವಣ ಸಂಬಂಧವಿದ್ದರೂ ದ್ವಾದಶಿಯಲ್ಲಿಯೇ ಪಾರಣೆ ಮಾಡಬೇಕು. ವಿಷ್ಣುಶೃಂಖಲ ಯೋಗವೇ ಮೊದಲಾದವುಗಳ ನಿರ್ಣಯವು ಭಾದ್ರಪದ ಮಾಸದಲ್ಲಿ ಬರುವ ಶ್ರವಣದ್ವಾದಶಿಯು ಪ್ರಕರಣದಲ್ಲಿ ಹೇಳಲ್ಪಡುವದು.

## ದ್ವಾದಶಿಯಲ್ಲಿ ಬಿಡಬೇಕಾದವುಗಳು.

(೧) ಹಗಲು ನಿದ್ರೆ, (೨) ಪರಾನ್ನ (೩) ಪುನಃ ಊಟ ಮಾಡುವದು, (೪) ಮೈಥುನ, (೫) ಜೇನುತುಪ್ಪ, (೬) ಕಂಚಿನಪಾತ್ರೆ, (೭) ಮಾಂಸ, (೮) ಎಣ್ಣೆ ಈ ಎಂಟನ್ನೂ ದ್ವಾದಶಿಯಲ್ಲಿ ಬಿಡಬೇಕು.

ಜೂಜಾಡುವದು, ಸಿಟ್ಟು ಮಾಡುವದು, ಕಡಲೆ, ಹಾರಕ, ಉದ್ದು, ಎಳ್ಳುಹುಡಿ, ಕಿರಿಗಡಲೆ, ಕಣ್ಣುಕಾಡಿಗೆ, ಸುಳ್ಳು ಹೇಳುವದು, ಲೋಭ, ಶ್ರಮ, ದೇಶಾಂತರ ಸಂಚಾರ, ಭಾರವನ್ನು ಹೊರುವದು, ಅಧ್ಯಯನ ಮಾಡುವದು, ತಾಂಬೂಲ ಹಾಕಿಕೊಳ್ಳುವದು, ಇವೇ ಮೊದಲಾದವುಗಳನ್ನು ಬಿಡಬೇಕು. ಈ ನಿಯಮಗಳು ಕಾಮ್ಯವ್ರತದಲ್ಲಿ ಅವಶ್ಯಕಗಳು,

ನಿತ್ಯವ್ರತದಲ್ಲಿಯೋ ಅಂದರೆ, ಶಕ್ತನಾದವನು ವಿಶೇಷ ನಿಯಮಗಳನ್ನು ನಡಿಸಬಹುದು. ಅಶಕ್ತನಾದವನು ಮುಖ್ಯವಾಗಿ (ಏಕಾದಶಿಯ) ಹಗಲು ರಾತ್ರಿಗಳೆರಡರಲ್ಲಿಯೂ ಊಟಮಾಡದೆ (ಎರಡು ಹೊತ್ತೂ ಊಟ ಮಾಡದೆ) ಜಿತೇಂದ್ರಿಯನಾಗಿ, ಶ್ರದ್ಧಾಳುವಾಗಿ ವಿಷ್ಣುತತ್ಪರನಾಗಿರಬೇಕು. ಹೀಗೆ ಏಕಾದಶೀ ವ್ರತವನ್ನು ಮಾಡುವದರಿಂದ ಪಾಪಗಳಿಂದ ಮುಕ್ತನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ. ಏಕಾದಶೀ ದಿನದಲ್ಲಿ ಊಟಮಾಡೆಂದು ಮತ್ತೊಬ್ಬನಿಗೆ ಹೇಳುವವನೂ ಊಟ ಮಾಡುವವನೂ ಕೂಡ ನರಕಭಾಜನರಾಗುತ್ತಾರೆ. ಯಾವನು ಏಕಾದಶೀ ವ್ರತವನ್ನು ಮಾಡುವನೋ ಅವನು ಇಹದಲ್ಲಿ ಐಶ್ವರ್ಯವನ್ನೂ ಪರದಲ್ಲಿ ವಿಷ್ಣುಸಾಯುಜ್ಯವನ್ನೂ ಹೊಂದುತ್ತಾನೆ. ಇಲ್ಲಿಗೆ ಏಕಾದಶೀ ನಿರ್ಣಯವು.

ಏಕಾದಶೀ ವ್ರತವಲ್ಲದ ಇತರ ಕರ್ಮಗಳಿಗೆ ದ್ವಾದಶೀ ಯುಕ್ತವಾದ ಏಕಾದಶೀ ತಿಥಿಯನ್ನೇ ಪರಿಗ್ರಹಿಸಬೇಕು.

ಇಲ್ಲಿಗೆ ಏಕಾದಶೀ ನಿರ್ಣಯವೆಂಬ ೧೭ನೇ ಉದ್ದೇಶವು.

---

[ ೧೮ ]

## ದ್ವಾದಶೀ ನಿರ್ಣಯ.

ದ್ವಾದಶೀಯಾದರೋ ಏಕಾದಶೀ ವೇಧೆಯುಳ್ಳದ್ದೇ ಗ್ರಾಹ್ಯವಾಗಿದೆ. ಎಂಟು ಮಹಾ ದ್ವಾದಶಿಗಳುಂಟು. ಯಾವವೆಂದರೆ, (೧) ಶುದ್ಧವಾದ ಅಧಿಕೈಕಾದಶೀ ಯುಕ್ತವಾದ ದ್ವಾದಶಿಗೆ **ಉನ್ಮೀಲನೀ** ಎಂತ ಹೆಸರು. (೨) ದ್ವಾದಶಿಯೇ ಶುದ್ಧವಾಗಿದ್ದು ಅಧಿಕವಾಗಿ ವೃದ್ಧಿಯಾಗಿದ್ದರೆ ಅದಕ್ಕೆ **ಮಂಜುಲಿನೀ** ಎಂತ ಸಂಜ್ಞೆ. (೩) ಸೂರ್ಯೋದಯ ಕಾಲಕ್ಕೆ ಏಕಾದಶಿ ಇದ್ದು, ಅನಂತರ ದ್ವಾದಶಿಯು ಕ್ಷೀಣವಾಗಿ ಮೂರನೆಯ ದಿನ ಸೂರ್ಯೋದಯ ಕಾಲಕ್ಕೆ ತ್ರಯೋದಶಿಯು ಬಂದಿದ್ದರೆ ಒಂದು ದಿವಸಕ್ಕೆ ಮೂರು ತಿಥಿಗಳ ಸ್ಪರ್ಶವಿರುವದರಿಂದ ಈ ದ್ವಾದಶಿಗೆ **ತ್ರಿಸ್ಪರ್ಶೀ** ಎಂದು ಹೆಸರು. (೪) ಅಮಾವಾಸ್ಯೆಗಾಗಲೀ ಹುಣ್ಣಿಮೆಗಾಗಲೀ ಒಂದು ದಿನವು ಹೆಚ್ಚಿದರೆ ಆ ದ್ವಾದಶಿಗೆ **ಪಕ್ಷವರ್ಧಿನೀ** ಎಂತ ಹೆಸರು. (ಅಂದರೆ

ದ್ವಾದಶಿಯಿಂದ ನಾಲ್ಕನೆಯ ದಿನದಲ್ಲಾಗುವ ಅಮಾವಾಸ್ಯೆ ಅಥವಾ ಹುಣ್ಣಿಮೆಯಾಗಲೀ ತಿಥಿ ವೃದ್ಧಿಯಿಂದ ಐದನೆಯ ದಿನದಲ್ಲಿ ಬಂದರೆ ಅದಕ್ಕೆ ಪಕ್ಷವರ್ಧಿನೀ ಎಂತ ಸಂಜ್ಞೆ) (೫) ಪುಷ್ಯನಕ್ಷತ್ರದ ಸಂಬಂಧ ಉಂಟಾದ ದ್ವಾದಶಿಗೆ **ಜಯಾ** ಎಂತ ಹೆಸರು (೬) ಶ್ರವಣಯುಕ್ತವಾದ ದ್ವಾದಶಿಗೆ **ವಿಜಯಾ** ಎಂತ ಹೆಸರು, (೭) ಪುನರ್ವಸೂ ಯುಕ್ತವಾದ ದ್ವಾದಶಿಗೆ **ಜಯಂ**ತೀ ಎಂದು ಹೆಸರು. (೮) ರೋಹಿಣಿ ಯುಕ್ತವಾದ ದ್ವಾದಶಿಗೆ **ಪಾಪನಾಶನೀ**ಎಂತ ಹೆಸರು. ಪಾಪವು ನಾಶವಾಗಬೇಕೆಂದೂ ಮೋಕ್ಷವಾಗಬೇಕೆಂದೂ ಅಪೇಕ್ಷೆಯುಳ್ಳವರು ಈ ಮಹಾ ದ್ವಾದಶಿಗಳಲ್ಲಿ ಉಪವಾಸ ಮಾಡಬೇಕು. ಶ್ರವಣಯುಕ್ತವಾದ ದ್ವಾದಶಿಯು ಮಾತ್ರ ಏಕಾದಶಿಯಂತೆ ನಿತ್ಯವಾದದ್ದು. ಈ ಎಂಟು ವಿಧವಾದ ದ್ವಾದಶಿಗಳಲ್ಲಿ ಏಕಾದಶಿ ದ್ವಾದಶಿಗಳೆರಡೂ ಒಂದೇಯಾಗಿ ಬಂದರೆ ಒಟ್ಟಾಗಿಯೇ ಉಪವಾಸ ಮಾಡಬೇಕು. ಬೇರೆ ಬೇರೆಯಾಗಿ ಬಂದರೆ ಶಕ್ತನಾದವನು ಎರಡು ದಿನಗಳಲ್ಲಿಯೂ ಉಪವಾಸ ಮಾಡಬೇಕು. ಈ ಎರಡು ವ್ರತಗಳನ್ನೂ ಮಾಡುವದಾಗಿ ಪ್ರಾರಂಭಿಸಿದ್ದವನು ಎರಡು ಉಪವಾಸಗಳನ್ನು ಮಾಡುವದರಲ್ಲಿ ಅಶಕ್ತನಾದರೆ, ದ್ವಾದಶಿಯಲ್ಲಿ ಉಪವಾಸ ಮಾಡೋಣದರಿಂದಲೇ ಎರಡು ವ್ರತಗಳನ್ನು ಮಾಡಿದ ಪುಣ್ಯವನ್ನೂ ಪಡೆಯುವನು. ಇದರಲ್ಲಿ ದ್ವಾದಶಿಗೆ ಶ್ರವಣ ಸಂಬಂಧವು ಒಂದು ಮುಹೂರ್ತವಿದ್ದರೂ ಅದನ್ನು ಪರಿಗ್ರಹಿಸಬೇಕು. ಪುಷ್ಯವೇ ಮೊದಲಾದವುಗಳ ಯೋಗವು ಸೂರ್ಯನ ಉದಯಾದಿ ಅಸ್ತಮಾನ ಪರ್ಯಂತವಾಗಿ ಇದ್ದರೆ ಉಪವಾಸ ಮಾಡಬೇಕು. ಪಾರಣೆಯೇ ಅಂದರೆ ತಿಥಿ-ನಕ್ಷತ್ರ-ಸಂಯೋಗದ ಉಪವಾಸದಲ್ಲಿ ತಿಥಿ-ನಕ್ಷತ್ರಗಳೆರಡೂ ಕಳೆದ ಮೇಲೆ ಮಾಡಬೇಕು; ಅಥವಾ ಅವುಗಳಲ್ಲಿ ಯಾವದಾದರೊಂದು ಕಳೆದ ಮೇಲೆಯಾದರೂ ಮಾಡಬೇಕೆಂಬುವದು ಸರ್ವಸಾಧಾರಣವಾದ ನಿರ್ಣಯವಾಗಿದೆ.

ಇಲ್ಲಿಗೆ ದ್ವಾದಶೀ ನಿರ್ಣಯವೆಂಬ ೧೮ನೆಯ ಉದ್ದೇಶವು.

---

[ ೨೯ ]

## ತ್ರಯೋದಶೀ ನಿರ್ಣಯ.

ತ್ರಯೋದಶಿಯು ಶುಕ್ಲಪಕ್ಷದಲ್ಲಿ ಪೂರ್ವವಿದ್ಧವಾದದ್ದೂ, ಕೃಷ್ಣ ಪಕ್ಷದಲ್ಲಿ ಪರವಿದ್ಧವಾದದ್ದೂ ಗ್ರಾಹ್ಯವು. ಶನಿವಾರವೇ ಮೊದಲಾದ ವಾರಗಳಿಂದ ಯುಕ್ತವಾದ ಯಾವದಾದರೊಂದು ಶುಕ್ಲಪಕ್ಷದ ತ್ರಯೋದ ಶಿಯಲ್ಲಾರಂಭಿಸಿ ಒಂದು ವರ್ಷ ಪರ್ಯಂತವಾಗಿ ಎರಡು ಪಕ್ಷಗಳಲ್ಲಿಯೂ ಅದೇ ಶನಿವಾರಾದಿ ಯುತವಾದ ತ್ರಯೋದಶಿಯಲ್ಲಾಗಲೀ ಅಥವಾ ಶುಕ್ಲ ಪಕ್ಷದ ಇಪ್ಪತ್ತುನಾಲ್ಕು ತ್ರಯೋದಶಿಗಳಲ್ಲಿಯಾಗಲೀ, ಪ್ರದೋಷಕಾಲ ದಲ್ಲಿ ಮಾಡುವ ಈಶ್ವರ ಪೂಜಾಸಕ್ತ ಭೋಜನರೂಪವಾದ ಪ್ರದೋಷವ್ರತ ದಲ್ಲಿ, ಸೂರ್ಯಾಸ್ತಾನಂತರದಲ್ಲಿ ಪ್ರದೋಷಕಾಲವೆಂದು ಹೇಳಲ್ಪಡುವ ಮೂರು ಮುಹೂರ್ತ(ಆರು ಗಳಿಗೆ)ವ್ಯಾಪನೆಯುಳ್ಳ ತ್ರಯೋದಶಿಯನ್ನು ಪರಿ ಗ್ರಹಿಸಬೇಕು. ಎರಡು ದಿವಸಗಳಲ್ಲಿಯೂ ಪ್ರದೋಷವ್ಯಾಪ್ತಿಯಿದ್ದರೂ, ಎರಡು ದಿವಸಗಳಲ್ಲಿಯೂ ಸಮವಾಗಿ ಪ್ರದೋಷದ ಒಂದು ಭಾಗದಲ್ಲಿ ವ್ಯಾಪ್ತಿಯಿದ್ದರೂ ಕೂಡ ಎರಡನೆಯ ದಿನವನ್ನೇ ಸ್ವೀಕರಿಸಬೇಕು. ವಿಷಮ ವಾಗಿ ಏಕದೇಶದಲ್ಲಿ ವ್ಯಾಪ್ತಿಯಿದ್ದರೆ ಆಗ ಹಿಂದಿನ ದಿನದಲ್ಲಿ ಹೆಚ್ಚು ವ್ಯಾಪ ನೆಯಿದ್ದರೆ, ಹಿಂದಿನ ದಿನವನ್ನೇ ಪರಿಗ್ರಹಿಸಬಹುದು; ಆದರೆ ದೇವರಪೂಜೆ ಮಾಡಿ ಭೋಜನ ಮಾಡುವದಕ್ಕೆ ಸಾಕಾಗುವಷ್ಟು ಕಾಲ ತ್ರಯೋದಶಿಯು ಸಿಕ್ಕುವದಾದರೆ ಮಾತ್ರವೇ ಹಿಂದಿನದಿನ ಮಾಡಬಹುದು. ಹಾಗಿಲ್ಲದಿದ್ದರೆ ಸಮವಾಗಿದ್ದಾಗ ನಡೆಸುವಂತೆ ಪರದಿನವನ್ನೇ ಪರಿಗ್ರಹಿಸಬೇಕು. ಎರಡು ದಿವಸಗಳಲ್ಲಿಯೂ ತ್ರಯೋದಶಿವ್ಯಾಪ್ತಿಯು ಕರ್ಮಕಾಲಕ್ಕೆ ಸರ್ವಥಾ ಸಿಕ್ಕ ದೇ ಹೋದರೂ ಪರದಿನವನ್ನೇ ಪರಿಗ್ರಹಿಸ†ಬೇಕು,

ಇಲ್ಲಿಗೆ ತ್ರಯೋದಶೀ ನಿರ್ಣಯವೆಂಬ ೨೯ನೆಯ
ಉದ್ದೇಶವು ಮುಗಿದುದು.

---

† ಇಂಥಾ ಸಂದರ್ಭದಲ್ಲಿ ನಕ್ತವನ್ನು ಹಗಲಿನ ಎಂಟನೆಯ ಭಾಗದ ಲ್ಲಿಯೇ ಮಾಡಬೇಕೆಂದು ನಕ್ತಪ್ರಕರಣದಲ್ಲಿ ಹೇಳಿಯತ್ತೆ.

[ ೨೦ ]

## ಚತುರ್ದಶೀ ನಿರ್ಣಯ.

ಚತುರ್ದಶಿಯು ಶುಕ್ಲಪಕ್ಷದಲ್ಲಿ ಪೂರ್ಣಿಮಾಯುಕ್ತವಾದದ್ದೂ, ಕೃಷ್ಣಪಕ್ಷದಲ್ಲಿ ತ್ರಯೋದಶೀ ವೇಧೆಯುಳ್ಳದ್ದೂ ಗ್ರಾಹ್ಯವು; ಅಲ್ಲದೆ, ಪ್ರತಿ ತಿಂಗಳಲ್ಲಿಯೂ ಕೃಷ್ಣಪಕ್ಷ ಚತುರ್ದಶಿಯಲ್ಲಿ ಮಾಡುವ ಕಾಮ್ಯವಾದ ಮಾಸಶಿವರಾತ್ರಿವ್ರತದಲ್ಲಿ ಮಹಾಶಿವರಾತ್ರಿಯಂತೆ ಚತುರ್ದಶಿಯು ಅರ್ಧ ರಾತ್ರಿಗೆ ವ್ಯಾಪ್ತಿಯುಳ್ಳದ್ದೇ ಆಗಿರಬೇಕು. ಕೆಲವರು ಪ್ರದೋಷ ಮಾತ್ರ ವ್ಯಾಪನೆಯುಳ್ಳದ್ದನ್ನು ಪರಿಗ್ರಹಿಸುತ್ತಾರೆ. ಇದಕ್ಕೆ ಆಧಾರವೇನೆಂಬುವ ದನ್ನು ಯೋಚಿಸಬೇಕಾಗಿರುತ್ತೆ.

ಚತುರ್ದಶಿಯಲ್ಲಿ ಹಗಲು ಊಟಮಾಡಬಾರದೆಂಬುವದು ನಿತ್ಯವಾದು ದರಿಂದ ಅದನ್ನು ಕಾಪಾಡಿಕೊಳ್ಳುವದರಲ್ಲಿ, ಭೋಜನಕಾಲದಲ್ಲಿ ವ್ಯಾಪ್ತಿಯುಳ್ಳ ಚತುರ್ದಶಿಯನ್ನು ಬಿಟ್ಟು ತ್ರಯೋದಶಿಯಲ್ಲಾಗಲೀ, ಪೂರ್ಣಿಮಾ ಅಮಾ ವಾಸ್ಯೆಗಳಲ್ಲಾಗಲೀ ಭೋಜನ ಮಾಡಬಹುದು. ಶಿವರಾತ್ರಿವ್ರತ ಮಾಡತಕ್ಕ ವರು ಚತುರ್ದಶಿಯಲ್ಲಿಯೇ ಪಾರಣೆ ಮಾಡಬಹುದು. 'ವಿಧಿಪ್ರಾಪ್ತವಾದ ವಿಚಾರದಲ್ಲಿ ನಿಷೇಧವು ಪ್ರವೇಶಿಸುವದಿಲ್ಲ'ವೆಂತ ನಿಯಮವಿರೋಣದರಿಂದ 'ಚತುರ್ದಶ್ಯಷ್ಟಮೀದಿವಾ' ಎಂಬ ನಿಷೇಧವು ಈ ಸಂದರ್ಭದಲ್ಲಿ ಇಲ್ಲ.

ಇಲ್ಲಿಗೆ ಚತುರ್ದಶೀ ನಿರ್ಣಯವೆಂಬ ೨೦ನೆಯ
ಉದ್ದೇಶವು ಮುಗಿದುದು.

---

[ ೨೧ ]

## ಪೂರ್ಣಿಮಾ ಅಮಾವಾಸ್ಯೆಗಳ ನಿರ್ಣಯ.

ಸಾವಿತ್ರೀವ್ರತವು ಹೊರತು ಮಿಕ್ಕ ವ್ರತಾದಿಗಳಲ್ಲಿ ಪೂರ್ಣಿಮಾ-ಅಮಾವಾಸ್ಯೆಗಳನ್ನು ಎರಡನೆಯವುಗಳನ್ನೇ ಪರಿಗ್ರಹಿಸಬೇಕು. ಅಲ್ಲದೆ, ಶ್ರಾವಣ ಮತ್ತು ಕಾರ್ತಿಕ ಮಾಸಗಳ ಪೂರ್ಣಿಮಾಗಳು ಕುಲಧರ್ಮಾದಿ ವಿಷಯದಲ್ಲಿ ಚತುರ್ದಶೀ ವಿದ್ಧವಾದದ್ದು ಗ್ರಾಹ್ಯಗಳಾಗಿವೆ ಎಂದು ಹೇಳಿ ರುವ ಈ ಒಂದು ವಚನದಿಂದ ಕೆಲವರು ಕುಲಧರ್ಮದ ವಿಷಯದಲ್ಲಿ ಎಲ್ಲ

ಪೂರ್ಣಿಮೆಗಳನ್ನು ಪೂರ್ವವಿದ್ಧವಾದವುಗಳನ್ನೇ ಪರಿಗ್ರಹಿಸುತ್ತಿರುವರು. ಈ ವಿಷಯದಲ್ಲಿ ಮೂಲವನ್ನು ಹುಡುಕಬೇಕಾಗಿದೆ. ಆದರೆ 'ಚತುರ್ದಶಿಯು ಹದಿನೆಂಟು ಗಳಿಗೆಗಳಿಂದ ಪಂಚದಶಿಯನ್ನು ದೂಷಿಸುವದೆ'ಂಬ ವಚನದಂತೆ ಚತುರ್ದಶಿಯು ಹದಿನೆಂಟು ಗಳಿಗೆಗಿಂತ ಕಡಿಮೆಯಾಗಿದ್ದ ಪಕ್ಷದಲ್ಲಿ ಒಂದು ವೇಳೆ ಅಂಥಾ ಚತುರ್ದಶೀವೇಧೆಯುಳ್ಳ ಹುಣ್ಣಿಮೆಯನ್ನು ಕುಲ ಧರ್ಮ ವಿಷಯದಲ್ಲಿ ಪರಿಗ್ರಹಿಸಿದರೂ ಪರಿಗ್ರಹಿಸಲಿ. ಚತುರ್ದಶಿಯು ಹದಿನೆಂಟು ಗಳಿಗೆಗಿಂತಲೂ ಹೆಚ್ಚಾಗಿದ್ದಲ್ಲಿ ಅಂಥಾ ಚತುರ್ದಶಿವೇಧೆಯುಳ್ಳ ಹುಣ್ಣಿಮೆಯನ್ನು ಸ್ವೀಕರಿಸಬಾರದೆಂದು ನನಗೆ ತೋರುತ್ತದೆ. (ಇದು ಧರ್ಮಸಿಂಧುಕಾರರ ಸ್ವಾಭಿಪ್ರಾಯ.)

ಮಂಗಳವಾರದಿಂದ ಅಥವಾ ಸೋಮವಾರದಿಂದ ಕೂಡಿದ ಅಮಾವಾಸ್ಯೆಯಲ್ಲಿ ಸ್ನಾನದಾನಾದಿಗಳನ್ನು ಮಾಡುವದು ಬಹುಪುಣ್ಯಕರವಾದದ್ದು. ಇದರಂತೆ ಭಾನುವಾರದಿಂದ ಕೂಡಿದ ಸಪ್ತಮಿಯೂ, ಮಂಗಳವಾರದಿಂದ ಕೂಡಿದ ಚೌತಿಯೂ ಪುಣ್ಯಪ್ರದಗಳಾಗಿವೆ. ಅಲ್ಲದೆ, ಸೋಮವಾರದಿಂದ ಕೂಡಿದ ಅಮಾವಾಸ್ಯೆಯಲ್ಲಿ ಅಶ್ವತ್ಥಪೂಜೆಯೇ ಮೊದಲಾದ ಸ್ವರೂಪವುಳ್ಳ ಸೋಮವತೀವ್ರತವನ್ನು ಮಾಡುತ್ತಾರೆಯಷ್ಟೇ? ಆದರಲ್ಲಿ ಸೋಮವಾರಕ್ಕೆ ಅಪರಾಹ್ಣದೊಳಗಾಗಿ ಒಂದುಮುಹೂರ್ತ ಮಾತ್ರ ಅಮಾವಾಸ್ಯೆಯು ಸೇರಿದರೂ ಆ ದಿನದಲ್ಲಿ ವ್ರತವನ್ನು ಮಾಡಬೇಕು. ಹಗಲಿನ ಕೊನೆಯಲ್ಲಿ ಮೂರು ಮುಹೂರ್ತಾತ್ಮಕವಾದ ಸಾಯಾಹ್ನದಲ್ಲಿಯಾಗಲೀ, ರಾತ್ರಿಯಲ್ಲಾಗಲೀ ಅಮಾವಾಸ್ಯಾ ಯೋಗ ಉಂಟಾದರೂ ಅದರಲ್ಲಿ ವ್ರತವನ್ನು ಮಾಡಕೂಡದೆಂಬುವದು ಶಿಷ್ಟಾಚಾರವು.

## ಯತಿಗಳಿಗೆ ಕ್ಷೌರಕಾಲ.

ಯತಿಗಳಿಗೆ ಕ್ಷೌರಾದಿಗಳಲ್ಲಿ ಸೂರ್ಯೋದಯಾನಂತರ ಮೂರುಮುಹೂರ್ತವ್ಯಾಪ್ತಿಯುಳ್ಳ ಪೂರ್ಣಿಮೆಯನ್ನು ಪರಿಗ್ರಹಿಸಬೇಕು. ಮೂರನೆಯ ಮುಹೂರ್ತಕ್ಕೆ ಪೂರ್ಣಿಮೆಯ ಸ್ಪರ್ಶವು ಇಲ್ಲದಿದ್ದರೆ ಚತುರ್ದಶೀಯುಕ್ತವಾದದ್ದನ್ನೇ ಪರಿಗ್ರಹಿಸಬೇಕು.

ಇಲ್ಲಿಗೆ ಪಂಚದಶೀ ನಿರ್ಣಯವೆಂಬ ೨೧ನೆಯ
ಉದ್ದೇಶವು ಮುಗಿದುದು.

[ ೩೨ ]

## ಇಷ್ಟಿಕಾಲ ನಿರ್ಣಯ.

"ಪಕ್ಷಾಂತಾ ಉಪವಸ್ತವ್ಯಾಃ ಪಕ್ಷಾದ್ಯಾಯಷ್ಟವ್ಯಾಃ" ಪಕ್ಷಗಳ ಕೊನೆಗಳು ಉಪವಾಸಾರ್ಹಗಳೆಂತಲೂ, ಪಕ್ಷಗಳ ಆದಿಗಳು ಇಷ್ಟಿಗೆ ಅರ್ಹಗಳೆಂತಲೂ ಹೇಳಿದೆ. ಇಲ್ಲಿ ಉಪವಾಸವೆಂದರೆ ಅನ್ವಾಧಾನವೆಂಬ ಕರ್ಮಕ್ಕೆ ಹೆಸರು.

"ಪರ್ವಣೋಯಶ್ಚತುರ್ಥಾಂಶ ಆದ್ಯಾಃಪ್ರತಿಪದಸ್ತ್ರಯಃ || ಯಾಗಕಾಲಸ್ಸವಿಜ್ಞೇಯಃ ಪ್ರಾತರುಕ್ತೋ ಮನೀಷಿಭಿಃ|| ಪ್ರತಿಪತ್ತುರ್ಯಚರಣೆ ನಯಷ್ಟವ್ಯಮಿತಿಸ್ಥಿತಿಃ || "

'ಪರ್ವಗಳ (ಪೂರ್ಣಿಮಾ ಅಮಾವಾಸ್ಯೆಗಳ) ನಾಲ್ಕನೆಯ ಭಾಗವೂ ಪಾಡ್ಯದ ಮೂರು ಭಾಗಗಳೂ ಪ್ರಾತಃಕಾಲದಲ್ಲಿ ಬಂದರೆ ಅದು ಕಾಲವೆಂದು ತಿಳಿಯತಕ್ಕದ್ದು. ಪಾಡ್ಯದ ನಾಲ್ಕನೆಯ ಪಾದದಲ್ಲಿ ಇಷ್ಟಿಯನ್ನು ಮಾಡಕೂಡದು ಎಂತ ಹೇಳಿದೆ ಈ ಸಂದರ್ಭದಲ್ಲಿ ಪೂರ್ಣಿಮಾ ಅಮಾವಾಸ್ಯೆ ಗಳೂ ಪಾಡ್ಯವೂ ಪೂರ್ಣತಿಥಿಗಳಾಗಿದ್ದರೆ ಸಂದೇಹವೇ ಇಲ್ಲ; ಯಾಕಂದರೆ ಪರ್ವದಲ್ಲಿ ಅಂದರೆ ಪೂರ್ಣಿಮಾ ಅಮಾವಾಸ್ಯೆಗಳಲ್ಲಿ ಅನ್ವಾಧಾನಕ್ಕೂ, ಮುಂದಿನ ದಿನದಲ್ಲಿ ಯಾಗಕ್ಕೂ ಉಕ್ತಕಾಲವು ಲಭಿಸುವದು. ಪರ್ವವು (ಅಮಾವಾಸ್ಯಾ ಪೂರ್ಣಿಮೆಗಳು) ಖಂಡವಾಗಿದ್ದರೆ ಪರ್ವಕ್ಕಿಂತ ಕಡಿಮೆಯಾಗಿರುವ ಅಥವಾ ಹೆಚ್ಚಾಗಿರುವ ಪಾಡ್ಯದ ಗಳಿಗೆಗಳನ್ನು ಎಣಿಸಿ, ಪಾಡ್ಯವು ಕಡಿಮೆಯಾಗಿದ್ದರೆ ಆ (ಅಂತರದ)ಗಳಿಗೆಗಳ ಅರ್ಧವನ್ನು ಪರ್ವದ ಗಳಿಗೆಗಳಲ್ಲಿ ಕಳೆಯಬೇಕು. ಪಾಡ್ಯವು ಹೆಚ್ಚಾಗಿದ್ದರೆ ಆ ಅರ್ಧವನ್ನು ಪರ್ವಕ್ಕೆ ಸೇರಿಸಬೇಕು. ಹೀಗೆ ಮಾಡುವದರಿಂದ ಸಂಧಿಕಾಲವನ್ನು ತಿಳಿದು ಅನ್ವಾಧಾನಾದಿ ಕಾಲವನ್ನು ನಿರ್ಣಯ ಮಾಡಬೇಕು. ಎಲ್ಲಿ ಪಾಡ್ಯವು ಹೆಚ್ಚು ಕಡಿಮೆಯಾಗದೆ ಪರ್ವಕ್ಕೆ ಸಮಾನವಾಗಿಯೇ ಇರುವದೋ ಅಲ್ಲಿ ಇದ್ದದ್ದು ಇದ್ದಂತೆಯೇ ಆಗುವದರಿಂದ ಸಂಧಿಯು ಸ್ಪಷ್ಟವೇ ಆಗಿರುವದು.

## ಪರ್ವ ಪ್ರತಿಪತ್ತುಗಳ ಸಂಧಿಕಾಲ ನಿರ್ಣಯ.

ಸಂಧಿಯು (೧) ಪೂರ್ವಾಹ್ಣ ಸಂಧಿ, (೨) ಮಧ್ಯಾಹ್ನಸಂಧಿ,

(೩) ಅಪರಾಹ್ಣಸಂಧಿ, (೪) ರಾತ್ರಿಸಂಧಿ, ಎಂದು ನಾಲ್ಕು ವಿಧವಾಗಿರುತ್ತೆ. ಇಲ್ಲಿ ಎರಡರಿಂದ ಭಾಗಿಸಿದ ಹಗಲಿನ (ಅಹಃಪ್ರಮಾಣಗಳಿಗೆಯ) ಮೊದಲನೆಯ ಅರ್ಧಕ್ಕೆ ಪೂರ್ವಾಹ್ಣವೆಂತಲೂ, ಎರಡನೆಯ ಅರ್ಧಕ್ಕೆ ಅಪರಾಹ್ಣವೆಂತಲೂ ಹೆಸರು. ಈ ಪೂರ್ವಾಹ್ಣ ಅಪರಾಹ್ಣಗಳ ಸಂಧಿಭೂತವಾದ ಎರಡು ಗಳಿಗೇರೂಪವಾದ ಒಂದು ಮುಹೂರ್ತಕ್ಕೆ ಮಧ್ಯಾಹ್ನವೆಂದು ಹೆಸರು. (ಅಂದರೆ ಪೂರ್ವಾಹ್ಣದ ಕೊನೆಯ ಗಳಿಗೆ ಒಂದು, ಅಪರಾಹ್ಣದ ಮೊದಲನೆಯ ಗಳಿಗೆ ಒಂದು, ಈ ಎರಡು ಗಳಿಗೇಕಾಲಕ್ಕೆ ಮಧ್ಯಾಹ್ನವೆಂತ ಹೆಸರು) ಇದಕ್ಕೆ ಆವರ್ತನ ಎಂಬುವದು ಪರ್ಯಾಯ ಶಬ್ದವೆಂದು ಕೌಸ್ತುಭದಲ್ಲಿ ಹೇಳಿದೆ. ಪೂರ್ವಾಹ್ಣ ಮತ್ತು ಅಪರಾಹ್ಣಗಳ ಸಂಧಿಯಾದ ಒಂದು ಗಳಿಗೆಯ ಕಾಲವು ಮಾತ್ರ ಮಧ್ಯಾಹ್ನವೇ ಹೊರತು ಎರಡು ಗಳಿಗೇ ಕಾಲವು ಮಧ್ಯಾಹ್ನವಲ್ಲವೆಂದು ಈಗಿನ ಶಿಷ್ಟರು ಪ್ರಾಯಿಕವಾಗಿ ಆಚರಿಸುತ್ತಿದ್ದಾರೆ, ಇದರಲ್ಲಿ ಹಿಂದೆ ಹೇಳಿದಂತೆ, ಕಡಿಮೆಯಾದ ಅಥವಾ ಹೆಚ್ಚಾದ ಗಳಿಗೆಗಳ ಅರ್ಧವನ್ನು ಕಳೆಯುವದೋ ಅಥವಾ ಕೂಡಿಸುವದೋ ಇವುಗಳಿಂದ ನಿರ್ಣಯ ಮಾಡಿದ ಪರ್ವಪ್ರತಿಪತ್ತುಗಳ ಸಂಧಿಯು ಪೂರ್ವಾಹ್ಣದಲ್ಲಿಯಾಗಲೀ ಮಧ್ಯಾಹ್ನದಲ್ಲಿಯಲ್ಲಾಗಲೀ ಬಂದರೆ, ಸಂಧಿಯು ಬಂದ ದಿನದ ಹಿಂದಿನ ದಿನದಲ್ಲಿ ಅನ್ವಾಧಾನವನ್ನೂ ಸಂಧಿಯು ಬಂದದಿನದಲ್ಲಿ ಯಾಗವನ್ನೂ ಮಾಡಬೇಕು. ಸಂಧಿಯು ಅಪರಾಹ್ಣದಲ್ಲಿಯಾಗಲೀ ರಾತ್ರಿಯಲ್ಲಾಗಲೀ ಬಂದರೆ ಸಂಧಿದಿನದಲ್ಲಿ ಅನ್ವಾಧಾನವೂ ಮಾರನೆಯ ದಿನ ಯಾಗವೂ ನಡಿಯಬೇಕು.

## ಉದಾಹರಣೆ.

ಪರ್ವಘಳಿಗೆ ೧೭ ಪಾಡ್ಯ ೧೧ ಇದೆ ಈ ಸಂದರ್ಭದಲ್ಲಿ ಪಾಡ್ಯವು ಪರ್ವಕ್ಕಿಂತ ೬ ಗಳಿಗೆ ಕಡಿಮೆಯಾಗಿದೆ. ಇದರ ಅರ್ಧವು ೬/೨ = ೩ ಗಳಿಗೆ ಯಾಗುತ್ತೆ. ಇದನ್ನು ಪರ್ವದಲ್ಲಿ ಕಳೆದರೆ (೧೭-೩) ೧೪ನೇ ಗಳಿಗೆಯು ಸಂಧಿಕಾಲವಾಯಿತು. ಇದು ೩೦ ಗಳಿಗೆ ಅಹಃಪ್ರಮಾಣವುಳ್ಳ ದಿನದಲ್ಲಿ ಪೂರ್ವಾಹ್ಣಸಂಧಿಯೂ ೨೮ ಗಳಿಗೆ ಅಹಃಪ್ರಮಾಣವುಳ್ಳ ದಿನದಲ್ಲಿ ಮಧ್ಯಾಹ್ನ ಸಂಧಿಯೂ ಆಗುತ್ತೆ. ಈ ಸಂದರ್ಭದಲ್ಲಿ ಸಂಧಿದಿನದಲ್ಲಿ ಯಾಗವನ್ನೂ ಅದರ ಹಿಂದಿನ ದಿನದಲ್ಲಿ ಅನ್ವಾಧಾನವನ್ನೂ ಮಾಡಬೇಕು. ಪರ್ವ

೧೪ ಸಾಧ್ಯ ೧೯ ಇಲ್ಲಿ ೫ ಗಳಿಗೆ ವೃದ್ಧಿಯಾಯಿತು. ಆದ್ದರಿಂದ ಆದರ ಅರ್ಧ ೫/೨=೨|| ಇದನ್ನು ಪರ್ವ ಗಳಿಗೆಗೆ ಸೇರಿಸುವದರಿಂದ (೧೪+೨||) ೧೬ || ಗಳಿಗೆಗೆ ಸಂಧಿಯಾಗುತ್ತೆ. ಇದು ಅಪರಾಹ್ಣ ಸಂಧಿಯು. ಇಲ್ಲಿ ಸಂಧಿ ದಿನದಲ್ಲಿ ಅನ್ವಾಧಾನವನ್ನೂ ಪರದಿನದಲ್ಲಿ ಯಾಗ ವನ್ನೂ ಮಾಡಬೇಕು.

## ಪ್ರಕಾರಾಂತರ ಸಂಧಿ ನಿರ್ಣಯ.

ಇದೇ ವಿಷಯವು ಸುಲಭವಾಗಿ ತಿಳಿಯುವದಕ್ಕಾಗಿ ಬೇರೊಂದು ರೀತಿಯಿಂದ ತಿಳಿಸಲ್ಪಡುತ್ತೆ. ಸೂರ್ಯೋದಯಾನಂತರದಲ್ಲಿರುವ ಪರ್ವದ ಗಳಿಗೆಗಳನ್ನೂ ಸಾಧ್ಯದ ಗಳಿಗೆಗಳನ್ನೂ ಒಟ್ಟು ಗೂಡಿಸುವದರಲ್ಲಿ ಆ ಗಳಿಗೆಗಳು ಅಹಃಪ್ರಮಾಣಗಳ ಗಳಿಗೆಗಿಂತ ಕಡಿಮೆಯಾದಲ್ಲಿ ಪೂರ್ವಾಹ್ಣ ಸಂಧಿ ಎಂತಲೂ ಸಮಾನವಾದರೆ ಮಧ್ಯಾಹ್ನ ಸಂಧಿಯೆಂತಲೂ, ಹೆಚ್ಚಾದರೆ ಅಪರಾಹ್ಣ ಸಂಧಿ ಎಂತಲೂ ತಿಳಿಯಬೇಕು. ಈ ರೀತಿಯಾಗಿಯೇ, ಸೂರ್ಯೋದಯಾನಂತರದಲ್ಲಿರುವ ಪರ್ವಪ್ರತಿಪತ್ತುಗಳ ಕ್ಷಯ-ವೃದ್ಧಿಗಳಿಂದಲೇ ಸಂಧಿಯನ್ನು ನಿರ್ಣಯ ಮಾಡುವ ಪದ್ಧತಿಯು, ಎಲ್ಲಾ ಕಡೆಗಳಲ್ಲಿಯೂ ಶಿಷ್ಟರ ಆಚರಣೆಯಲ್ಲಿದ್ದು ಪ್ರಸಿದ್ಧವಾಗಿದೆ. ಕೌಸ್ತುಭವೇ ಮೊದಲಾದವುಗಳಲ್ಲಿ, ಚತುರ್ದಶೀ ದಿನದಲ್ಲಿರುವ ಪರ್ವದ ಗತ (ಕಳೆದ) ಗಳಿಗೆಗಳನ್ನೂ ಆ ದಿನ ಸೂರ್ಯೋದಯಾನಂತರದಲ್ಲಿ ಇರುವ ಗಳಿಗೆಗಳನ್ನೂ ಒಟ್ಟುಗೂಡಿಸಿ, ಇದರಂತೆಯೇ ಹಿಂದಿನ ದಿನದಲ್ಲಿ ಕಳೆದು ಹೋದ ಮತ್ತು ಆ ದಿನದಲ್ಲಿರುವ ಸಾಧ್ಯದ ಗಳಿಗೆಗಳನ್ನೂ ಸೇರಿಸಿ, ಪರ್ವಕ್ಕಿಂತ ಸಾಧ್ಯವು ಹೆಚ್ಚಾಗಿದೆಯೋ ಕಡಿಮೆಯಾಗಿದೆಯೋ ಎಂಬುವದನ್ನು ತಿಳಿಯಬೇಕೆಂದು ಇದೆ. ಉದಾಹರಣೆ. ಚತುರ್ದಶಿ ೨೨ ಆ ಮೇಲೆ ಇರುವ ಪರ್ವ ಗಳಿಗೆಗಳು ೩೮ ಮೂರನೆಯ ದಿನದಲ್ಲಿರುವ ಪರ್ವ ಗಳಿಗೆ ೧೭ ಒಟ್ಟು (೩೮+೧೭) ೫೫ ಪರ್ವದಿನದಲ್ಲಿರುವ ಸಾಧ್ಯದ ಗಳಿಗೆ ೪೩ ಮರುದಿವಸದಲ್ಲಿರುವ ಗಳಿಗೆ ೧೧ ಒಟ್ಟು (೪೩+೧೧)=೫೪ ಈ ಸಂದರ್ಭದಲ್ಲಿ ಪರ್ವಕ್ಕಿಂತ ಸಾಧ್ಯವು ಒಂದು ಗಳಿಗೆ ಕಡಿಮೆಯಾಯಿತು. ಆದ್ದರಿಂದ ಆ ಒಂದು ಗಳಿಗೆಯ ಅರ್ಧವನ್ನು ಪರ್ವ ಗಳಿಗೆ ೧೭ ರಲ್ಲಿ ಕಳೆದರೆ ೧೬ || ಗಳಿಗೆಗೆ ಸಂಧಿಯು ಬಂದದುದರಿಂದ ಇದು ಅಪರಾಹ್ಣ ಸಂಧಿಯಾಯಿತು. ಇದೇ

ಸಂದರ್ಭದಲ್ಲಿ ಮೊದಲು ಹೇಳಿದ ಮತದಲ್ಲಿ ಪೂರ್ವಾಹ್ಣ ಸಂಧಿಯಾಗುತ್ತೆ. ಮತ್ತು ಚತುರ್ದಶಿ ೨೪ ಅನಂತರ ಪರ್ವ ೩೬ ಮೂರನೆಯ ದಿನ ಪರ್ವ ೧೬ ಇವೆರಡನ್ನೂ ಸೇರಿಸುವದರಲ್ಲಾದ ಗಳಿಗೆ (೩೬+೧೬)=೫೩ ಇದರಂತೆ ಪಾಡ್ಯ ೪೩ ಮೂರನೆಯ ದಿನ ಪಾಡ್ಯ ೧೧ ಇವುಗಳ ಒಟ್ಟು ೫೪. ಈಗ ಹಿಂದಿನ ರೀತಿಯಂತೆ ಕ್ಷಯೋದಾಹರಣೆಗಿಂತ ೧ ಗಳಿಗೆ ವೃದ್ಧಿಯಾಯಿತು. ಇದರ ಅರ್ಧವನ್ನು ಪರ್ವಗಳಿಗೆ ೧೬ಕ್ಕೆ ಸೇರಿಸುವದರಲ್ಲಿ ೧೬ ‖ ಗಳಿಗೆಗೆ ಅಪರಾಹ್ಣ ಸಂಧಿಯಾಯಿತು. ಒಟ್ಟಿನಲ್ಲಿ ಹೀಗೆ ವೃದ್ಧಿ-ಕ್ಷಯಗಳೆಲ್ಲವೂ ವಿಪರೀತವಾಗೋಣದರಿಂದ ಮೊದಲಿನ ಮತಕ್ಕೂ ಈ ಮತಕ್ಕೂ ಅತ್ಯಂತ ವಿರೋಧವುಂಟಾಗುವುದು. ಈ ಮತದಲ್ಲಿ ೨ ‖ ಗಳಿಗೆಗಿಂತ ಹೆಚ್ಚಾದ ವೃದ್ಧಿಯಾಗಲೀ ಕ್ಷಯವಾಗಲೀ ಆಗುವದಿಲ್ಲ. ಈ ಮತವನ್ನು ಅಂಗೀಕರಿಸುವ ಪಕ್ಷದಲ್ಲಿ "ಪರೇಹ್ನಿ ಘಟಿಕಾ ನ್ಯೂನಾಸ್ತಥೈವಾಭ್ಯಧಿಕಾಶ್ಚಯಾಃ" 'ಪರದಿವಸದಲ್ಲಿ ಕಡಿಮೆಯಾದ ಗಳಿಗೆಗಳೂ ಮತ್ತು ಹೆಚ್ಚಾದ ಗಳಿಗೆಗಳೂ' ಎಂಬ ವಚನದಲ್ಲಿರುವ ಬಹು ವಚನವು ಅಸಂಗತವಾಗಬೇಕಾಗುತ್ತದೆ' ಎಂದು ಈ ಮತವನ್ನು ತಿರಸ್ಕರಿಸಿರುವದನ್ನು ಪುರುಷಾರ್ಥ ಚಿಂತಾಮಣಿಯಲ್ಲಿ ನೋಡಬಹುದು.

## ಯಾಗಕಾಲದಲ್ಲಿ ವಿಶೇಷವು.

## ಪೂರ್ಣಿಮಾದಲ್ಲಿ ವಿಶೇಷವು.

ಪೂರ್ಣಿಮಾದಲ್ಲಿ ಸಂಗಮಕಾಲದ ಮೇಲೆ ಹದಿಮೂರನೆಯ ಗಳಿಗೆಯೇ ಮೊದಲಾಗಿ ಹಗಲಿನ ಅರ್ಧಭಾಗದೊಳಗಾಗಿ ಸಂಧಿಯು ಬಂದರೆ ಆ ಪೂರ್ಣಿಮಾಕ್ಕೆಸದ್ಯಃಸ್ಕಾಲಾ* ಪೂರ್ಣಿಮಾಸೀ ಎಂಬ ಸಂಜ್ಞೆ. ಇದರಲ್ಲಿ ಸಂಧಿ ದಿನದಲ್ಲಿಯೇ ಅನ್ವಾಧಾನವನ್ನೂ ಇಷ್ಟಿಯನ್ನೂ ಆಗಲೇ ಮಾಡಬೇಕು. ಪೂರ್ಣಿಮಾದಲ್ಲಿ ಈ ಸದ್ಯಸ್ಕಾಲತ್ವವೆಂಬುವುದು, ವಿಕಲ್ಪವೆಂದು ಕೆಲವರು ಹೇಳುವರು. ಅಮಾವಾಸ್ಯೆಯಲ್ಲೆಲ್ಲಾ ಎರಡು ದಿವಸಗಳ ಕಾಲದಲ್ಲಿ ನಡೆಯಬೇಕಾದ್ದೇ ಹೊರತು ಸದ್ಯಸ್ಕಾಲತ್ವವು ಇಲ್ಲ; ಪೂರ್ಣಿಮಾದಲ್ಲಿಯೂ, ಅಮಾವಾಸ್ಯೆಯಲ್ಲಿಯೂ, ಅಪರಾಹ್ಣದಲ್ಲಿ ಸಂಧಿಯು ಬಂದಾಗ

* ಸದ್ಯಸ್ಕಾಲಾ:—ಒಂದೇ ದಿನದಲ್ಲಿಯೇ ಎರಡು ಕೆಲಸಗಳು ನಡೆಯಬೇಕಾದದ್ದು.

ಪಾಡ್ಯದ ನಾಲ್ಕನೇ ಪಾದದಲ್ಲಿ ಯಾಗವನ್ನು ಮಾಡುವುದು ದೋಷವಲ್ಲ. ಅಮಾವಾಸ್ಯೆಯಲ್ಲಿ ಅಪರಾಹ್ಣ ಸಂಧಿ ಬಂದರೂ ಪಾಡ್ಯದಲ್ಲಿ ಮೂರು ಮುಹೂರ್ತಕ್ಕಿಂತ ಹೆಚ್ಚಾದ ಬಿದಿಗೆಯು ಬಂದಲ್ಲಿ ಚಂದ್ರದರ್ಶನವಾಗುವದರಿಂದ ‹ಚಂದ್ರದರ್ಶನದಲ್ಲಿ ಯಜ್ಞವನ್ನು ಮಾಡಬಾರದು; ಎಂದು ಇರುವದರಿಂದ, ಅಮಾವಾಸ್ಯೆಯಲ್ಲಿಯೇ ಯಾಗವನ್ನೂ ಚತುರ್ದಶಿಯಲ್ಲಿ ಅನ್ವಾಧಾನವನ್ನೂ ಮಾಡಬೇಕೆಂಬುವುದು ಬೋಧಾಯನರೇ ಮೊದಲಾದವರಿಗೆಂದು ತಿಳಿಯಬೇಕು. ಅಮಾವಾಸ್ಯೆಯಲ್ಲಿ ಪಾಡ್ಯವು ಹದಿನೇಳುಗಳಿಗೆ ಇಲ್ಲದೇ ಇರುವ ಪಕ್ಷದಲ್ಲಿ, ಚಂದ್ರದರ್ಶನವಾಗುವದಾದರೂ ಬೋಧಾಯನರು ಪಾಡ್ಯದಲ್ಲಿಯೇ ಯಾಗವನ್ನು ಮಾಡಬೇಕು. ಆಶ್ವಲಾಯನ, ಆಪಸ್ತಂಭಾದಿಗಳಿಗೆ ಚಂದ್ರದರ್ಶನವು ನಿಷಿದ್ಧವಾಗಿಲ್ಲವಾದುದರಿಂದ ಅವರುಗಳು ಪಾಡ್ಯದಲ್ಲಿಯೇ ಇಷ್ಟಿ ಮಾಡಬೇಕು. ಸಂಧಿ ಬಂದ ದಿನದಲ್ಲಿಯೇ ಇಷ್ಟಿ ಮಾಡಬೇಕಾದಾಗ, ಆ ಇಷ್ಟಿಯನ್ನು ಪಾಡ್ಯದಲ್ಲಿ ಮುಗಿಸಬೇಕೇ ಹೊರ್ತು ಪರ್ವದಲ್ಲಿ ಮುಗಿಸಬಾರದು. ಯಾಗವನ್ನು ಪರ್ವದಲ್ಲಿ ಮುಗಿಸಿದರೆ, ಮರಳಿ ಯಾಗ ಮಾಡಬೇಕಾಗುವುದು.

## ಸ್ಥಾಲೀಪಾಕಕಾಲ.

ಸ್ಮಾರ್ತಕರ್ಮದಲ್ಲಿಯೂ ಪರ್ವಗಳಲ್ಲಿ ಮಾಡಬೇಕಾದ ಸ್ಥಾಲೀಪಾಕ ನಿರ್ಣಯವು ಇದರಂತೆಯೇ ಎಂದು ತಿಳಿಯತಕ್ಕದ್ದು. ಕೆಲವರು ಸ್ಥಾಲೀಪಾಕವನ್ನು ಪಾಡ್ಯದಲ್ಲಿಯೇ ಮುಗಿಸಬೇಕೆಂಬ ನಿಯಮವಿಲ್ಲ, ಪೂರ್ವಾಹ್ಣದಲ್ಲಿಯೇ ಸ್ಥಾಲೀಪಾಕವನ್ನು ಮುಗಿಸಿ, ಬ್ರಾಹ್ಮಣ ಭೋಜನವನ್ನು ಮಾತ್ರ ಸಂಧಿಯು ಕಳೆದ ಮೇಲೆ ಪಾಡ್ಯದಲ್ಲಿ ಮಾಡಿಸಬೇಕೆಂದು ಹೇಳುವರು. ಮತ್ತು ಸಂಧಿಗೆ ಸಮೀಪವಾದ ಪ್ರಾತಃಕಾಲದಲ್ಲಿಯೇ ಸ್ಥಾಲೀಪಾಕವನ್ನು ಜಯಂತನೂ ಹೇಳಿದ್ದಾನೆಂದು ವಿಶೇಷವನ್ನು ಹೇಳುವರು. ಪುರುಷಾರ್ಥ ಚಿಂತಾಮಣಿಗ್ರಂಥದಲ್ಲಿ ಶ್ರೌತದಲ್ಲಿಯೂ ಬ್ರಾಹ್ಮಣಭೋಜನವನ್ನು ಮಾತ್ರ ಅಪರಾಹ್ಣದಲ್ಲಿ ಮಾಡಿಸಬೇಕೆಂದೂ ಬಾಕಿ ತಂತ್ರಗಳನ್ನೆಲ್ಲಾ ಪೂರ್ವಾಹ್ಣದಲ್ಲಿ ಮುಗಿಸಬಹುದೆಂದೂ ಪಾಡ್ಯವನ್ನೇನೂ ಕಾಯಬೇಕಾದ್ದಿಲ್ಲವೆಂದೂ ಹೇಳಿದೆ.

## ಕಾತ್ಯಾಯನರಿಗೆ ಪೂರ್ಣಿಮಾದಲ್ಲಿ ವಿಶೇಷ.

ಕಾತ್ಯಾಯನರು ಪೂರ್ಣಿಮಾ ಇಷ್ಟಿಯಲ್ಲಿ ಹಿಂದೆ ಹೇಳಿದ ಸರ್ವ ಸಾಧಾರಣ ನಿಯಮವನ್ನೇ ಅನುಸರಿಸಬೇಕು. ಇದರಲ್ಲಿ ವಿಶೇಷವೇನೂ ಇಲ್ಲವೆಂಬುವದು ನಿರ್ಣಯಸಿಂಧುವೇ ಮೊದಲಾದ ಅನೇಕ ಗ್ರಂಥಗಳ ಅಭಿಪ್ರಾಯವಾಗಿದೆ ಮತ್ತೆ ಕೆಲವರು ಪೂರ್ವಾಹ್ಣದಲ್ಲಿ ಸಂಧಿಯು ಬಂದ ಪೂರ್ಣಿಮಾದಲ್ಲಿ ಸಂಧಿ ದಿನದಲ್ಲಿ ಅನ್ವಾಧಾನವನ್ನೂ ಮಾರನೆಯ ದಿನದಲ್ಲಿ ಯಾಗವನ್ನೂ ಮಾಡಬೇಕೆಂದು ವಿಶೇಷವನ್ನು ಹೇಳುತ್ತಾರೆ.

## [ ೩೩ ]

## ಕಾತ್ಯಾಯನರಿಗೆ ಅಮಾವಾಸ್ಯೆಯಲ್ಲಿ ವಿಶೇಷ.

ಇಲ್ಲಿ ಅಮಾವಾಸ್ಯಾ ವಿಷಯದಲ್ಲಿ ಅಹಃಪ್ರಮಾಣವನ್ನು ಮೂರು ಭಾಗ ಮಾಡುವದರಲ್ಲಿ ಮೊದಲನೆಯ ಭಾಗವನ್ನು ಪೂರ್ವಾಹ್ಣವೆಂತಲೂ ಎರಡನೆಯ ಭಾಗವನ್ನು ಮಧ್ಯಾಹ್ನವೆಂತಲೂ ಮೂರನೆಯ ಭಾಗವನ್ನು ಅಪರಾಹ್ಣವೆಂತಲೂ ತಿಳಿಯಬೇಕು ಇಲ್ಲಿ ಸಂಧಿಯು ರಾತ್ರಿಯಲ್ಲಿ ಬಂದರೆ ಪಾಡ್ಯದ ದಿನದಲ್ಲಿ ಚಂದ್ರದರ್ಶನವಾದರೂ ಇತರರಿಗೆ ಹೇಗೋ ಹಾಗೆ ಕಾತ್ಯಾಯನರಿಗೂ ಕೂಡ, ಪಿಂಡಪಿತೃಯಜ್ಞ, ಅನ್ವಾಧಾನಗಳು ಸಂಧಿದಿನದಲ್ಲಿಯೂ ಯಾಗವು ಮಾರನೆಯ ದಿನದಲ್ಲಿಯೂ ನಡಿಯತಕ್ಕದ್ದೆಂಬುವದರಲ್ಲಿ ಯಾವ ವಿವಾದವೂ ಇಲ್ಲ.

ಪೂರ್ವಾಹ್ಣದಲ್ಲಿಯೂ, ಹಗಲಿನ ಎರಡನೆಯ ಭಾಗವಾದ ಮಧ್ಯಾಹ್ನದಲ್ಲಿಯೂ ಸಂಧಿಯು ಬಂದರೆ ಸಂಧಿಗೆ ಹಿಂದಿನ ದಿನದಲ್ಲಿ ಅನ್ವಾಧಾನ ಪಿಂಡ-ಪಿತೃಯಜ್ಞಗಳೂ, ಸಂಧಿ ದಿನದಲ್ಲಿ ಇಷ್ಟಿಯೂ ನಡೆಯತಕ್ಕದ್ದು. ಚತುರ್ದಶೀ ದಿನದಲ್ಲಿ ಅಮಾವಾಸ್ಯೆಯು ಹಗಲಿನ ಮೂರನೆಯಭಾಗವಾದ ಅಪರಾಹ್ಣದಲ್ಲಿ ಸಂಪೂರ್ಣವಾಗಿ ವ್ಯಾಪಿಸಿ ಇದ್ದರೆ ಆಗ ಅಮಾವಾಸ್ಯೆಯಿಂದ ಕೂಡಿದ ಆ ಅಪರಾಹ್ಣದಲ್ಲಿ ಪಿಂಡಪಿತೃಯಜ್ಞವೆಂಬುವದರಲ್ಲಿ ಸಂಶಯವೇ ಇಲ್ಲ; ಆದರೆ ಹಗಲಿನ ಮೂರನೆಯ ಭಾಗವೆಂಬ ಅಪರಾಹ್ಣದ ಕೊನೆಯ ಭಾಗದಲ್ಲಿಯಾಗಲೀ ಅಥವಾ ಅಪರಾಹ್ಣದ ಏಕದೇಶದಲ್ಲಿಯಾಗಲೀ, ಅಮಾವಾಸ್ಯಾ ವ್ಯಾಪ್ತಿಯು ಇದ್ದರೆ ಆಗ ಅಮಾವಾ

ಸ್ಯೆಯು ಬಂದ ಮೇಲೆ ಪಿಂಡಪಿತೃಯಜ್ಞವನ್ನು ಮಾಡಬೇಕಲ್ಲದೆ ಚತುರ್ದಶಿಯಲ್ಲಿ ಮಾಡಕೂಡದೆಂಬುವದು ಒಂದು ಪಕ್ಷವು. ಚಂದ್ರನು ತುಂಬಾ ಕ್ಷೀಣನಾಗಿರುವದರಿಂದ ಚತುರ್ದಶಿಯ ಕೊನೆಯ ಭಾಗದಲ್ಲಿ ಪಿಂಡಪಿತೃಯಜ್ಞವನ್ನು ಮಾಡಬೇಕೆಂಬುವದು ಎರಡನೆಯ ಪಕ್ಷವಾಗಿರುತ್ತೆ. ಇದಾದ ಮೇಲೆ ಅಪರಾಹ್ಣಸಂಧಿವಿಷಯದಲ್ಲಿ ನಾಲ್ಕು ಪಕ್ಷಗಳಿವೆ (೧) ಸಂಧಿದಿನದಲ್ಲಿಯೇ ಹಗಲಿನ ಮೂರನೆಯ ಭಾಗವೆಂಬ ಅಪರಾಹ್ಣದಲ್ಲಿ ಅಮಾವಾಸ್ಯೆಯು ಸಂಪೂರ್ಣವಾಗಿ ವ್ಯಾಪಿಸಿರುವದು ಒಂದನೆಯ ಪಕ್ಷ. ಉದಾಹರಣೆ—ಚತುರ್ದಶಿ ೨೯, ಅಮಾ ೩೦, ಪಾಡ್ಯ ೨೯, ಅಹಃಪ್ರಮಾಣ ೩೦ ಈ ಸಂದರ್ಭದಲ್ಲಿ ಅನ್ವಾಧಾನ ಪಿಂಡ, ಪಿತೃಯಜ್ಞಗಳು ಸಂಧಿ ದಿನದಲ್ಲಿಯೂ, ಪರದಿನದಲ್ಲಿ ಯಾಗವೂ ನಡೆಯಬೇಕು. (೨) ಸಂಧಿದಿನಕ್ಕೆ ಹಿಂದಿನ ದಿವದಲ್ಲಿಯೇ ಅಮಾವಾಸ್ಯೆಯು ಹಿಂದೆ ಹೇಳಿದ ಅಪರಾಹ್ಣದಲ್ಲಿ ವ್ಯಾಪಿಸಿರೋಣ ಎರಡನೆಯ ಪಕ್ಷ. ಉದಾಹರಣೆ —ಚತು ೨೦, ಅಮಾ ೨೨, ಪಾಡ್ಯ ೨೪, ಅಹಃ ೩೦ ಈ ಸಂದರ್ಭದಲ್ಲಿ ಸಂಧಿ ದಿನದ ಮಾರನೆಯ ದಿನದಲ್ಲಿ ಮೂರು ಮುಹೂರ್ತರೂಪವಾದ ಪ್ರಾತಃಕಾಲದಲ್ಲಿ ಪಾಡ್ಯದ ನಾಲ್ಕನೆಯ ಮೂರು ಭಾಗವು ($\frac{3}{4}$) ಕಳೆದು ಹೋಗದೆ ಇದ್ದು, ಯಾಗಕಾಲವು ಲಭಿಸುವದರಿಂದ ಸಂಧಿದಿನದಲ್ಲಿ ಅನ್ವಾಧಾನಪಿಂಡಪಿತೃಯಜ್ಞಗಳೂ, ಪಾಡ್ಯದದಿನದಲ್ಲಿ ಯಾಗವೂ ನಡಿಯಬೇಕೆಂಬುವದು ಕೌಸ್ತುಭದ ಅಭಿಪ್ರಾಯವು. ಮತ್ತೆ ಕೆಲವರು:—

"ತ್ರಿಮುಹೂರ್ತಾ ದ್ವಿತೀಯಾಚೇತ್ ಪ್ರತಿಪಚ್ಚಾಪರಾಹ್ಣಿಕೀ ||
ಅನ್ವಾಧಾನಂ ಚತುರ್ದಶ್ಯಾಂ ಪರತಸ್ಸೋಮದರ್ಶನಾತ್ ||

"ಪಾಡ್ಯವು ಅಪರಾಹ್ಣ ವ್ಯಾಪ್ತಿಯುಳ್ಳದ್ದಾಗಿದ್ದು, ಆ ದಿನ ಬಿದಿಗೆಯು ಮೂರು ಮುಹೂರ್ತವಿದ್ದರೆ, ಸಂಧಿಯ ಮರುದಿನ ಚಂದ್ರದರ್ಶನವಾಗುವದರಿಂದ ಚತುರ್ದಶಿಯಲ್ಲಿ ಅನ್ವಾಧಾನ ಮಾಡಬೇಕು.'' ಎಂಬ ವಚನಾನುಸಾರ ಚತುರ್ದಶೀ ದಿವದಲ್ಲಿ ಪಿಂಡಪಿತೃಯಜ್ಞ, ಅನ್ವಾಧಾನಗಳನ್ನೂ ಸಂಧಿದಿನದಲ್ಲಿ ಇಷ್ಟಿಯನ್ನೂ ಮಾಡಬೇಕೆಂದು ಹೇಳುವರು. ಇದೇ ಎರಡನೆಯ ಪಕ್ಷಕ್ಕೆ ಮತ್ತೊಂದು ಉದಾಹರಣೆ,—ಚತು ೧೮, ಅಮಾ ೧೮, ಪಾಡ್ಯ ೧೯, ಅಹಃ ೨೭ ಈ ಸಂದರ್ಭದಲ್ಲಿ ಪಾಡ್ಯದ ಪ್ರಾತಃಕಾಲದಲ್ಲಿ

ಪಾಡ್ಯದ ನಾಲ್ಕನೆಯ ಮೂರು ಭಾಗಗಳೊಳಗಾಗಿ ಯಾಗಕಾಲವು ಲಭಿಸುವದಿಲ್ಲವಾದುದರಿಂದ ಕಾತ್ಯಾಯನರಿಗೆ ಸಂಧಿದಿನದಲ್ಲಿಯೇ ಇಷ್ಟಿ ಎಂಬುವದು ಎಲ್ಲರಿಗೂ ಸಮ್ಮತವಾಗಿರುತ್ತೆ ಹಿಂದಿನ ದಿನದಲ್ಲಿ ಪಿಂಡಪಿತೃಯಜ್ಞ, ಅನ್ವಾಧಾನಗಳನ್ನು ನಡಿಸಬೇಕು.

(೩) ಎರಡು ದಿನಗಳಲ್ಲಿಯೂ ಅಪರಾಹ್ಣದ ಏಕದೇಶದಲ್ಲಿ ಸಮವಾಗಿಯಾಗಲೀ ವಿಷಮವಾಗಿಯಾಗಲೀ ವ್ಯಾಪ್ತಿ ಇರೋಣವು ಮೂರನೆಯ ಪಕ್ಷ. ಉದಾ—ಚತು ೨೫, ಅಮಾ ೨೫, ಪಾಡ್ಯ ೨೪, ಅಹಃ ೩೦. ಇದು ಸಮವ್ಯಾಪ್ತಿ ಇರೋಣವು. ಇಲ್ಲಿ ಹಿಂದೆ ಹೇಳಿದ ರೀತಿಯಂತೆ ಕೌಸ್ತುಭ ಮತ್ತು ಇತರ ಮತದಂತೆ ನಿರ್ಣಯವು ಎರಡು ಪ್ರಕಾರವಾಗಿರುತ್ತೆ. ಮತ್ತೊಂದು ಉದಾ—ಚತು ೨೫, ಅಮಾ ೨೦, ಪಾಡ್ಯ ೧೭, ಅಹಃ ೨೭. ಇದೂ ಕೂಡ ಅಪರಾಹ್ಣದ ಒಂದು ಭಾಗದಲ್ಲಿ ಸಮವಾಗಿ ವ್ಯಾಪ್ತಿ ಇರೋಣವು. ಈ ಸಂಭವದಲ್ಲಿ ಕಾತ್ಯಾಯನರಿಗೆ ಸರ್ವಮತದಲ್ಲಿಯೂ ಸಂಧಿ ದಿನದಲ್ಲಿಯೇ ಇಷ್ಟಿಯೂ ಹಿಂದಿನ ದಿನದಲ್ಲಿ ಪಿಂಡಪಿತೃಯಜ್ಞ, ಅನ್ವಾಧಾನಗಳೂ ನಡಿಯಬೇಕು. ಅನಂತರ ವಿಷಮವಾಗಿ ಅಪರಾಹ್ಣದ ಏಕದೇಶದಲ್ಲಿ ವ್ಯಾಪ್ತಿಇರುವದಕ್ಕೆ ಉದಾಹರಣೆ—ಚತು ೨೫, ಅಮಾ ೨೩. ಪಾಡ್ಯ ೨೩, ಅಹಃ ೩೦. ಇಲ್ಲಿಯೂ ಹಿಂದೆ ಹೇಳಿದಂತೆ ಮತಭೇದ ನಿರ್ಣಯವು ಎರಡುಪ್ರಕಾರವಾಗಿರುತ್ತೆಂದು ತಿಳಿಯಬೇಕು. ಇದೇ ವಿಷಯದಲ್ಲಿ ಮತ್ತೊಂದು ಉದಾಹರಣೆ— ಚತು ೨೫. ಅಮಾ ೨೨, ಪಾಡ್ಯ ೧೮, ಅಹಃ ೩೦ ಇದು ಕೂಡ ವಿಷಮವಾಗಿ ಏಕದೇಶದಲ್ಲಿ ವ್ಯಾಪ್ತಿಇರೋಣವು. ಇಲ್ಲಿ ಸರ್ವಮತದಲ್ಲಿಯೂ ಕಾತ್ಯಾಯನರಿಗೆ ಸಂಧಿ ದಿನದಲ್ಲಿ ಇಷ್ಟಿಯೂ, ಚತುರ್ದಶೀದಿನದಲ್ಲಿ ಪಿಂಡಪಿತೃಯಜ್ಞ ಅನ್ವಾಧಾನಗಳೂ ನಡೆಯಬೇಕು. ಮತ್ತೊಂದು ಉದಾ— ಚತು ೨೫, ಅಮಾ ೨೭, ಪಾಡ್ಯ ೨೯, ಅಹಃ ೩೦ ಇಲ್ಲಿ ಸಂಧಿ ದಿನದಲ್ಲಿ ಪಿಂಡಪಿತೃಯಜ್ಞ, ಅನ್ವಾಧಾನಗಳೂ ಪಾಡ್ಯದಲ್ಲಿ ಇಷ್ಟಿಯೂ ನಡಿಯಬೇಕು.

(೪) ಅನಂತರ ಸಂಧಿ ದಿನದಲ್ಲಿಯೇ ಅಪರಾಹ್ಣದ ಏಕದೇಶದಲ್ಲಿ ವ್ಯಾಪ್ತಿಇರೋಣವೆಂಬುವದು ನಾಲ್ಕನೆಯ ಪಕ್ಷ. ಉದಾ—ಚತು ೩೧, ಅಮಾ ೨೬, ಪಾಡ್ಯ ೨೩, ಅಹಃ ೩೦. ಮತ್ತೊಂದು ವಿಧ, ಚತು ೨೮,

ಅಮಾ ೨೨, ಪಾಡ್ಯ ೧೭, ಅಹಃ ೨೭, ಈ ಎರಡು ಉದಾಹರಣೆಗಳಲ್ಲಿಯೂ, ಸಂಧಿ ದಿನದಲ್ಲಿಯೇ ಪಿಂಡಪಿತೃಯಜ್ಞ, ಅನ್ವಾಧಾನಗಳೂ ಮಾರನೆಯ ದಿನ ಪಾಡ್ಯದಲ್ಲಿ ಯಾಗವೂ ನಡಿಯಬೇಕು. ಏವಂಚ, ಕಾತ್ಯಾಯನ ಮತದಲ್ಲಿಯೂ, ಎಲ್ಲ ಉದಾಹರಣೆಗಳಲ್ಲಿಯೂ ಚಂದ್ರದರ್ಶನ ನಿಷೇಧವನ್ನು ಕಾಪಾಡಿಕೊಳ್ಳುವದಕ್ಕೆ ಆಗುವದಿಲ್ಲ. ಆದರೆ ಕೆಲವು ಕಡೆಗಳಲ್ಲಿ ಚಂದ್ರದರ್ಶನ ನಿಷೇಧವನ್ನಂಗೀಕರಿಸಿ, ಯಾಗಾದಿಗಳನ್ನು ಪೂರ್ವದಿನದಲ್ಲಿಯೂ, ಕೆಲವು ಕಡೆಗಳಲ್ಲಿ ಚಂದ್ರದರ್ಶನವಾಗುವ ದಿನದಲ್ಲಿಯೇ ಮಾಡಬೇಕಾಗಿರುತ್ತೆ. ಪಿಂಡಪಿತೃಯಜ್ಞವೂ, ಇದರಂತೆಯೇ ಎಂದು ತಿಳಿಯುವದು. ದರ್ಶಶ್ರಾದ್ಧಕ್ಕಾಗಿ ಸರ್ವಸಾಧಾರಣವಾದ ಅಮಾವಾಸ್ಯಾ ನಿರ್ಣಯವು ಮುಂದೆ ಪ್ರತ್ಯೇಕವಾಗಿ ಹೇಳಲ್ಪಡುತ್ತೆ.

---

[ ೩೪ ]

## ಸಾಮಕರಿಗೆ ಇಷ್ಟಿ ನಿರ್ಣಯ.

ಇವರಿಗೂ ಪೂರ್ಣಿಮೆಯು ಹಿಂದೆ ಹೇಳಿದಂತೆ ಸರ್ವ ಸಾಮಾನ್ಯವಾದದ್ದೇ ಸಾಕಾಗಿರುತ್ತೆ. ಅಮಾವಾಸ್ಯೆಯಲ್ಲಿ ಮಾತ್ರ ಸಂಧಿಯು ರಾತ್ರಿಯಲ್ಲಿ ಬಂದರೆ ಚಂದ್ರದರ್ಶನವಾದರೂ ಸಹ ಪಾಡ್ಯದಲ್ಲಿಯೇ ಯಾಗವನ್ನು ಮಾಡಬೇಕು. ಸಂಧಿಯು ಅಪರಾಹ್ಣದಲ್ಲಿ ಬಂದಾಗ ಮಾರನೆಯ ದಿನ, ಆರುಗಳಿಗೇ ರೂಪವಾದ ಪ್ರಾತಃಕಾಲದಲ್ಲಿ, ಪಾಡ್ಯದ ನಾಲ್ಕು ಭಾಗಗಳಲ್ಲಿ ಮೊದಲನೆಯ ಮೂರು ಭಾಗ ರೂಪವಾದ ಯಾಗಕಾಲವು ಸಿಕ್ಕುವದಾದರೆ, ಚಂದ್ರದರ್ಶನವಾಗುವದಾದರೂ, ಪಾಡ್ಯದಲ್ಲಿಯೇ ಇಷ್ಟಿಯನ್ನೂ, ಸಂಧಿ ದಿನದಲ್ಲಿ ಅನ್ವಾಧಾನ ಪಿಂಡ ಪಿತೃಯಜ್ಞಗಳನ್ನೂ ಮಾಡಬೇಕು. ಮೇಲೆ ಹೇಳಿದಂತೆ ಯಾಗಕಾಲವು ದೊರೆಯದೇ ಇದ್ದಲ್ಲಿ ಸಂಧಿದಿನದಲ್ಲಿ ಯಾಗವನ್ನೂ ಹಿಂದಿನ ದಿನ ಅಂದರೆ ಚತುರ್ದಶಿಯಲ್ಲಿ ಅನ್ವಾಧಾನ ಪಿಂಡ ಪಿತೃಯಜ್ಞಗಳನ್ನೂ ಆಚರಿಸಬೇಕು. ಏವಂಚ ಸಾಮಕರೂ ಕಾತ್ಯಾಯನರಂತೆ ಚಂದ್ರದರ್ಶನ ನಿಷೇಧವನ್ನು ಸಮಯೋಚಿತವಾಗಿ ನೋಡಿಕೊಳ್ಳತಕ್ಕದ್ದು, ಎಂದು ಸಾಮಕರಿಗೆ ನಿರ್ಣಯವು.

ಇಲ್ಲಿಗೆ ಯಾಗಕಾಲ ನಿರ್ಣಯವೆಂಬ ಇಪ್ಪತ್ತೆರಡನೆಯ ಉದ್ದೇಶವು.

---

[ ೩೫ ]

## ಪಿಂಡ ಪಿತೃಯಜ್ಞಕ್ಕೆ ಕಾಲವು.

ಇದರಲ್ಲಿ ಆಶ್ವಲಾಯನರು, ಯಾವ ದಿವಸದಲ್ಲಿ ಪರ್ವಪ್ರತಿಪತ್ತು ಗಳ ಸಂಧಿಯು ಬರುವದೋ ಆ ದಿನದ ಅಪರಾಹ್ಣದಲ್ಲಿ ಅಂದರೆ ಐದು ಭಾಗವಾಗಿ ಮಾಡಿದ ಹಗಲಿನ (ಅಹಃಪ್ರಮಾಣದ) ನಾಲ್ಕನೆಯ ಭಾಗ ರೂಪವಾದ ಅಪರಾಹ್ಣದಲ್ಲಿ ಪಿಂಡ ಪಿತೃಯಜ್ಞವನ್ನು ಮಾಡಬೇಕು. ಅಂದರೆ ಅಪರಾಹ್ಣ ಸಂಧಿಯು ಬಂದಾಗ ಅದು ಅನ್ವಾಧಾನವು ಆಗಬೇಕಾದ ದಿನದಲ್ಲಿ ಆಗುತ್ತೆ. ಸಂಧಿಯು ಮಧ್ಯಾಹ್ನದಲ್ಲಿಯಾಗಲೀ ಪೂರ್ವಾಹ್ಣದಲ್ಲಿಯಾಗಲೀ ಬಂದರೆ ಇಷ್ಟಿದಿನದಲ್ಲಿ ಇಷ್ಟಿಯು ಮುಗಿದ ಮೇಲೆ ಅಪರಾಹ್ಣದಲ್ಲಿಯಾಗುವದು.

ಪರ್ವಪ್ರತಿಪತ್ತುಗಳ ಸಂದಿಯು ಅಹಸ್ಸು ಮತ್ತು ರಾತ್ರಿಗಳ ಸಂಧಿ ಕಾಲದಲ್ಲಿ (ಸಂಧ್ಯಾಕಾಲದಲ್ಲಿ) ಯಾಗುವದಾದರೆ ಆಗ ಅನ್ವಾಧಾನ ದಿನದಲ್ಲಿಯೇ ಪಿಂಡ ಪಿತೃಯಜ್ಞವನ್ನು ಮಾಡಬೇಕು. ಆಪಸ್ತಂಬ ಹಿರಣ್ಯಕೇಶಿ ಈ ಮತಾನುಸಾರಿಗಳೂ ಕೂಡ ಇದರಂತೆ ಅನ್ವಾಧಾನ ದಿನದಲ್ಲಿಯೇ ಪಿಂಡ ಪಿತೃಯಜ್ಞವನ್ನು ಮಾಡಬೇಕು. ಅಂದರೆ ಅದು ಅಪರಾಹ್ಣದಲ್ಲಿಯಾಗಲೀ ಸೂರ್ಯನು ಅಸ್ತನಾಗುತ್ತಿರುವ ಸಮಯದಲ್ಲಿಯಾಗಲೀ ಮಾಡತಕ್ಕದ್ದಾಗಿದೆ. ಮೇಲ್ಕಂಡ ಮತದಲ್ಲಿ ಐದಾಗಿ ಭಾಗಿಸಿದ ಹಗಲಿನ ನಾಲ್ಕನೆಯ ಭಾಗವಾಗಲೀ ಒಂಬತ್ತು ಭಾಗವಾಗಿ ಮಾಡಿದ ಹಗಲಿನ ಏಳನೆಯ ಭಾಗ ವಾಗಲೀ ಅಪರಾಹ್ಣವೆನಿಸಿಕೊಳ್ಳುವದು. ಸಾಂಖ್ಯಾಯನರು, ಕಾತ್ಯಾಯನರು, ಮತ್ತು ಸಾಮಕರು ಇವರುಗಳಿಗೆ ಅನ್ವಾಧಾನ ದಿನದಲ್ಲಿಯೇ ಪಿಂಡ ಪಿತೃಯಜ್ಞವೆಂದು ಈ ಮೊದಲೇ ಹೇಳಿದೆ; ಅಂದರೆ ಅದು ಮೂರಾಗಿ ಭಾಗಿಸಿದ ಹಗಲಿನ ಮೂರನೆಯ ಭಾಗರೂಪವಾದ ಅಪರಾಹ್ಣ ದಲ್ಲಿ ಮಾಡತಕ್ಕದ್ದಾಗಿದೆ. ದರ್ಶಶ್ರಾದ್ಧವೂ ಪಿಂಡ ಪಿತೃಯಜ್ಞವೂ ಒಂದೇ ದಿನದಲ್ಲಿ ಬಂದರೆ ಗೃಹ್ಯಾಗ್ನಿಯನ್ನಿಟ್ಟುಕೊಂಡಿರುವ ಋಗ್ವೇದಿಗಳು ಆವೆರಡು ಪ್ರಯೋಗಗಳನ್ನೂ ಒಟ್ಟಾಗಿ ನಡಿಸಬೇಕು. ಅಮಾವಾಸ್ಯೆಯು ಖಂಡ ತಿಥಿಯಾಗಿದ್ದರೆ ಹಿಂದಿನ ದಿನದಲ್ಲಿ ದರ್ಶಶ್ರಾದ್ಧವನ್ನು ಮಾತ್ರ

ಮಾಡಿ ಮಾರನೆಯ ದಿವಸ ಪಿಂಡ ಪಿತೃಯಜ್ಞ ಒಂದನ್ನೇ ಮಾಡಬೇಕು. ಶ್ರೌತಾಗ್ನಿಯನ್ನು ಇಟ್ಟುಕೊಂಡಿರುವರೋ ಅಂದರೆ ಪಿಂಡ ಪಿತೃಯಜ್ಞ ವನ್ನು ಮಾತ್ರವೇ ದಕ್ಷಿಣಾಗ್ನಿಯಲ್ಲಿ ಮಾಡಬೇಕು. ಎರಡನ್ನೂ ಒಟ್ಟಾಗಿ ಮಾಡಬಾರದು. ಶ್ರೌತಾಗ್ನಿಯುಳ್ಳವರು ದರ್ಶವು ಸಂಪೂರ್ಣವಾಗಿದ್ದಾಗ ಮೊದಲು ಅನ್ವಾಧಾನವನ್ನೂ ಅನಂತರ ವೈಶ್ವದೇವವನ್ನೂ ಆ ಮೇಲೆ ಪಿಂಡ ಪಿತೃಯಜ್ಞವನ್ನೂ ಅನಂತರ ದರ್ಶಶ್ರಾದ್ಧವನ್ನೂ ಕ್ರಮವಾಗಿ ಮಾಡಬೇಕು. ಅಗ್ನಿಹೋತ್ರಿಗೆ ತಂದೆಯು ಜೀವಂತನಾಗಿದ್ದರೆ, ಅವನು ಈ ಕಾಲದಲ್ಲಿಯೇ ಹೋಮಾನಂತರದಲ್ಲಿ ಪಿತಾಮಹನೇ ಮೊದಲಾದ ಮೂರು ಜನರನ್ನುದ್ದೇಶಿಸಿ ಪಿಂಡಸಹಿತವಾಗಿಯೇ ಆದರೂ ಪಿಂಡ ಪಿತೃ ಯಜ್ಞವನ್ನು ಮಾಡಬಹುದು. ಅಥವಾ ಪಿಂಡ ಪಿತೃಯಜ್ಞವನ್ನು ಆರಂಭಿ ಸದೇ ಇದ್ದರೂ ಇರಬಹುದು.

ಒಂದು ಇಷ್ಟಿಯು ತಪ್ಪಿ ಹೋದರೆ ಪಾದಕೃಛ್ರವೂ, ಎರಡು ಇಷ್ಟಿಗಳು ತಪ್ಪಿ ಹೋದರೆ ಅರ್ಧ ಕೃಛ್ರವೂ ಪ್ರಾಯಶ್ಚಿತ್ತವಾಗಿವೆ. ಮೂರು ಇಷ್ಟಿಗಳು ತಪ್ಪಿಹೋದಲ್ಲಿ ಅಗ್ನಿಯು ನಾಶವಾಗುವದರಿಂದ ಪುನಃ ಆಧಾನ ಮಾಡಬೇಕು. ಪಿಂಡ ಪಿತೃಯಜ್ಞವು ತಪ್ಪಿಹೊದರೆ ಪ್ರಾಯಶ್ಚಿತ್ತ ಕ್ಕಾಗಿ ವೈಶ್ವಾನರೇಷ್ಟಿಯನ್ನು ಮಾಡಬೇಕು. ಅಥವಾ "ಇಷ್ಟಿಸ್ಥಾನೆ ಸಪ್ತ ಹೋತಾರಂ ಹೋಷ್ಯಾಮಿ" ಎಂದು ಸಂಕಲ್ಪ ಮಾಡಿ ಆ ಮಂತ್ರ ದಿಂದ ಚತುರ್ಗೃಹೀತವಾದ ಆಜ್ಯದಿಂದ ಪೂರ್ಣಾಹುತಿಯನ್ನು ಮಾಡಬೇಕು.

ಇಲ್ಲಿಗೆ ಪಿಂಡಪಿತೃಯಜ್ಞಕಾಲ ನಿರ್ಣಯವೆಂಬ ೨೩ ನೆಯ
ಉದ್ದೇಶವು ಮುಗಿದುದು.

---

[ ೨೬ ]

## ಶ್ರಾದ್ಧವಿಷಯದಲ್ಲಿ ಅಮಾವಾಸ್ಯಾ ನಿರ್ಣಯ

ಹಗಲನ್ನು ಐದು ಭಾಗವಾಗಿ ಮಾಡುವದರಲ್ಲಿ ನಾಲ್ಕನೆಯ ಭಾಗ ರೂಪವಾದ ಅಪರಾಹ್ಣವ್ಯಾಪ್ತಿಯುಳ್ಳ ಅಮಾವಾಸ್ಯೆಯನ್ನು ದರ್ಶಶ್ರಾದ್ಧ ವಿಷಯದಲ್ಲಿ ಪರಿಗ್ರಹಿಸಬೇಕು. ಹಿಂದಿನ ದಿನದಲ್ಲಿಯೋ ಅಥವಾ ಮುಂ

ಶೂದ್ರಾದಿಗಳೂ ಕೂಡ ಕುಹೂ ಸಂಜ್ಞಕವಾದ ಸಾಧ್ಯದಿಂದ ಕೂಡಿದ ಎರಡನೆಯ ಅಮಾವಾಸ್ಯೆಯನ್ನು ಪರಿಗ್ರಹಿಸಬೇಕು, ಎಂದು ಮಾಧವಾಚಾರ್ಯರು ಹೇಳಿರುವ ಈ ದರ್ಶ ನಿರ್ಣಯವೇ ಪ್ರಾಯಕವಾಗಿ ಎಲ್ಲಾ ಕಡೆಯಲ್ಲಿಯೂ ಶಿಷ್ಟರಿಂದ ಆದೃತವಾಗಿರುವದು.

## ಮತಾಂತರ.

ಪುರುಷಾರ್ಥ ಚಿಂತಾಮಣಿಯಲ್ಲಿ “ಸಾಗ್ನಿಗಳಾದ ಋಗ್ವೇದಿಗಳೂ, ತೈತ್ತಿರೀಯರೂ ಕೂಡ, ಎರಡು ದಿನಗಳಲ್ಲಿಯೂ ಅಪರಾಹ್ಣ ವ್ಯಾಪ್ತಿಯು ಇಲ್ಲದಿದ್ದರೂ ಇಷ್ಟಿ ದಿನದ ಹಿಂದಿನ ದಿನದಲ್ಲಿಯೇ ದರ್ಶ ಶ್ರಾದ್ಧವನ್ನು ಮಾಡಬೇಕು; ಹಾಗೂ ಎರಡು ದಿನಗಳಲ್ಲಿಯೂ, ಅಪರಾಹ್ಣದಲ್ಲಿ ಸಂಪೂರ್ಣ ವ್ಯಾಪ್ತಿಯು ಇದ್ದರೆ ಆಗ ಎರಡನೆಯ ದಿನವೇ ದರ್ಶ ಶ್ರಾದ್ಧವು ನಡಿಯಬೇಕು; ಎರಡು ದಿನಗಳಲ್ಲಿಯೂ ಅಪರಾಹ್ಣದ ಏಕದೇಶದಲ್ಲಿ ವ್ಯಾಪ್ತಿ ಇದ್ದರೆ ಸಾಧ್ಯವು ವೃದ್ಧಿಯಾಗೋಣದರಿಂದ ಇಷ್ಟಿಯು ಸಾಧ್ಯದ ದಿನದಲ್ಲಿ ನಡಿಯುವದಾದರೆ, ದರ್ಶವು ಎರಡನೆಯ ದಿನವೇ ನಡಿಯಬೇಕು. ಎರಡನೆಯ ದಿನದಲ್ಲಿ ಮಾತ್ರವೇ ಅಪರಾಹ್ಣ ವ್ಯಾಪ್ತಿ ಇದ್ದು, ಸಾಧ್ಯವು ಕ್ಷಯವಾಗೋಣದರಿಂದ ಇಷ್ಟಿಯು ಅಮಾವಾಸ್ಯೆಯಲ್ಲಿಯೇ ನಡಿಯಬೇಕಾಗಿ ಬಂದರೆ ಆಗ ಋಗ್ವೇದಿಗಳು ಸಿನೀವಾಲಿಯನ್ನೂ ತೈತ್ತಿರೀಯರು ಕುಹೂವನ್ನೂ ಗ್ರಹಿಸ*ಬೇಕು, ಎಂದು ಹೇಳಿದೆ.. ಸಾಮವೇದಿಗಳು ವಿಕಲ್ಪದಿಂದ ಎರಡನ್ನೂ ಪರಿಗ್ರಹಿಸಬಹುದು. ಹಿಂದಿನ ದಿನದಲ್ಲಿಯೇ ಅಪರಾಹ್ಣದಲ್ಲಿ ಹೆಚ್ಚು ವ್ಯಾಪ್ತಿ ಇದ್ದು, ಎರಡನೆಯ ದಿನದಲ್ಲಿ ಸ್ವಲ್ಪವೇ ವ್ಯಾಪ್ತಿ ಇದ್ದರೆ ಆಗ ಸಾಮವೇದಿಗಳು ಮೊದಲನೆಯದನ್ನೂ ತೈತ್ತಿರೀಯರು ಎರಡನೆಯದನ್ನೂ ಪರಿಗ್ರಹಿಸಬೇಕು. ಎರಡು ದಿನಗಳಲ್ಲಿಯೂ ಅಪರಾಹ್ಣಕ್ಕೆ ಸ್ಪರ್ಶವಿಲ್ಲದಿದ್ದರೂ, ಸಾಮಕರಿಗೆ ಮೊದಲನೆಯದೂ, ತೈತ್ತಿರೀಯರಿಗೆ ಎರಡನೆಯದೂ ಎಂಬಿವೇ ಮೊದಲಾದವುಗಳು ಹೇಳಲ್ಪಟ್ಟಿವೆ. §ದರ್ಶದಲ್ಲಿ ದರ್ಶಶ್ರಾದ್ಧ

* ಈ ಅಭಿಪ್ರಾಯವು ಮತ್ತೆಲ್ಲಿಯಾದರೂ ಇದೆಯೇ ಎಂಬುವದನ್ನು ಹುಡುಕಬೇಕು.

§ ಕಾತ್ಯಾಯನರಿಗೆ ದರ್ಶಶ್ರಾದ್ಧವು ಪಿಂಡ ಪಿತೃಯಜ್ಞ ದಿನದಲ್ಲಿಯೇ ಎಂದು ಮುಂದೆ ಹೇಳಲ್ಪಡುವದು.

ವರ್ಷಶ್ರಾದ್ಧಗಳಾಗಲೀ, ದರ್ಶ ಮಾಸಿಕಗಳಾಗಲೀ, ದರ್ಶ, ಉದಕುಂಭ ಶ್ರಾದ್ಧಗಳಾಗಲೀ ಒಟ್ಟಾಗಿ ಬಂದರೆ, ದೇವತೆಗಳು ಭೇದವಾಗುವದರಿಂದ ಪ್ರತ್ಯೇಕ ಎರಡು ಶ್ರಾದ್ಧಗಳನ್ನು ಮಾಡಬೇಕು. ಅದರಲ್ಲಿ ಮೊದಲು ಮಾಸಿಕ, ವರ್ಷಶ್ರಾದ್ಧವೇ ಮೊದಲಾದವುಗಳನ್ನು ಮಾಡಿ ಅನಂತರ ಬೇರೆ ಪಾಕದಿಂದ ದರ್ಶಶ್ರಾದ್ಧವನ್ನು ಮಾಡಬೇಕು. ವೈಶ್ವದೇವವನ್ನು ವಾರ್ಷಿಕಾದಿ ಶ್ರಾದ್ಧ ಶೇಷದಿಂದಾಗಲೀ ಪ್ರತ್ಯೇಕವಾದ ಪಾಕದಿಂದಾಗಲೀ ದರ್ಶಶ್ರಾದ್ಧಕ್ಕಿಂತ ಮುಂಚಿತವಾಗಿ ಮಾಡಬೇಕು. ಆಹಿತಾಗ್ನಿಯು ಮಾತ್ರ ವೈಶ್ವದೇವವನ್ನೂ ಪಿಂಡ ಪಿತೃಯಜ್ಞವನ್ನೂ ಮಾಡಿ ಅನಂತರದಲ್ಲಿ ವಾರ್ಷಿಕ ಶ್ರಾದ್ಧವನ್ನು ಮಾಡಬೇಕು. ದರ್ಶ ಶ್ರಾದ್ಧವನ್ನು ಉಪನಯನವಾಗದಿದ್ದವರೂ, ಅಪತ್ನೀಕರೂ, ದೇಶಾಂತರಗತರಾದವರೂ ಕೂಡ ಮಾಡಬೇಕು. ಅಮಾವಾಸ್ಯಾಶ್ರಾದ್ಧವನ್ನು ಅತಿಕ್ರಮಿಸುವದರಲ್ಲಿ "ನ್ಯೂಷು ವಾಚಂ" ಎಂಬ ಮಂತ್ರವನ್ನು ನೂರು ಸಾರಿ ಜಪಿಸಬೇಕು.

ಇಲ್ಲಿಗೆ ದರ್ಶನಿರ್ಣಯವೆಂಬ ಇಪ್ಪತ್ತಾಲ್ಕನೆಯ ಉದ್ದೇಶವು.

---

[ ೨೫ ]

## ಇಷ್ಟಿಯೇ ಮೊದಲಾದವುಗಳ ಪ್ರಾರಂಭನಿರ್ಣಯ.

ಇಷ್ಟಿ ಮತ್ತು ಸ್ಥಾಲೀಪಾಕಗಳನ್ನು ಪೂರ್ಣಿಮಾದಲ್ಲಿ ಪ್ರಾರಂಭಿಸಬೇಕೇ ಹೊರತು ಅಮಾವಾಸ್ಯೆಯಲ್ಲಿ ಪ್ರಾರಂಭಿಸಕೂಡದು. ಆಧಾನ, ಗೃಹಪ್ರವೇಶನೀಯ ಹೋಮುಗಳು ಮುಗಿದ ಒಡನೆಯೇ ಪೂರ್ಣಿಮಾದಲ್ಲಿ ದರ್ಶ-ಪೌರ್ಣಮಾಸಗಳನ್ನು ಆರಂಭಿಸುವದಾದರೆ, ಆಗ ಮಲಮಾಸ, ವೃಷ್ಯ ಮಾಸ, ಶುಕ್ರಾಸ್ತವೇ ಮೊದಲಾದ ದೋಷಗಳಿಲ್ಲ; ಆಗಲೇ ಮಾಡದೇ ಬಿಟ್ಟಲ್ಲಿ ಶುದ್ಧಮಾಸಾದಿಗಳನ್ನು ನೋಡಬೇಕೆಂದು ಕೆಲವರು ಹೇಳುತ್ತಾರೆ. ಮತ್ತೆ ಕೆಲವರು ಹೇಗೇ ಆದರೂ ಶುದ್ಧಕಾಲದಲ್ಲಿಯೇ ಪ್ರಾರಂಭಿಸಬೇಕೆಂದು ಹೇಳುವರು.

ಇಲ್ಲಿಗೆ ಇಷ್ಟಿಯೇ ಮೊದಲಾದವುಗಳ ಪ್ರಾರಂಭ ನಿರ್ಣಯವೆಂಬ ೨೫ನೆಯ ಉದ್ದೇಶವು ಮುಗಿದುದು.

---

## [ ೩೮ ]

## ವಿಕೃತಿಗೆ ಕಾಲ.

ವಿಕೃತಿಗಳು ಮೂರು ವಿಧವಾಗಿವೆ ಆಗ್ರಯಣ, ಚಾತುರ್ಮಾಸ್ಯ ಇವೇ ಮೊದಲಾದವುಗಳು ನಿತ್ಯಗಳು. ಜಾತೇಷ್ಟ್ಯಾದಿಗಳು ನೈಮಿತ್ತಿಕಗಳು. ಸೌರೇಷ್ಟ್ಯಾದಿಗಳು ಕಾಮ್ಯಗಳು. ಇವು ಪುರುಷಾರ್ಥಗಳು. ಹೀಗೆಯೇ ಯಜ್ಞಕ್ಕೆ ಅಂಗಭೂತವಾದ ವಿಕೃತಿಗಳೂ ನಿತ್ಯ, ನೈಮಿತ್ತಿಕಗಳೆಂದು ಎರಡು ವಿಧವಾಗಿವೆ. [illegible] ಇಷ್ಟಿಗಳೆರಡನ್ನೂ ಒಂದೇ ದಿನದಲ್ಲಿಯಾಗಲೀ, [illegible] ದಿನಗಳಲ್ಲಿಯಾಗಲೀ ಮಾಡಬಹುದೆಂಬುವದು ವಿಕಲ್ಪವು. [illegible] ದಲ್ಲಿಯಾಗಲಿ, ಶುಕ್ಲಪಕ್ಷದಲ್ಲಿರುವ ದೇವನಕ್ಷತ್ರಗಳಲ್ಲಿಯಾಗಲಿ ಮಾಡಬೇಕೆಂಬುವದೂ ವಿಕಲ್ಪವೇ ಆಗಿರುತ್ತೆ. ಇದರಲ್ಲಿ [illegible] ಪಕ್ಷದಲ್ಲಿ, ಸಂಧಿಯು ಅಪರಾಹ್ಣವೇ ಮೊದಲಾದವುಗಳಲ್ಲಿ [illegible], ವಿಕೃತಿಯನ್ನು ಒಂದೇ ದಿನದಲ್ಲಿ ಮಾಡತಕ್ಕದ್ದಾಗಿಯಾಗಲಿ, [illegible] ಎರಡು ದಿನಗಳಲ್ಲಿ ಮಾಡತಕ್ಕದ್ದಾಗಿಯಾಗಲಿ ಮಾಡಿ ಪ್ರಕೃತಿಗೆ [illegible] ಮಾಡಬೇಕು ಸಂಧಿಯು ಮಧ್ಯಾಹ್ನದಲ್ಲಿಯಾಗಲಿ, [illegible] ದಲ್ಲಿಯಾಗಲೀ ಬಂದರೆ, ಸಂಧಿ ದಿನದಲ್ಲಿ ಪ್ರಕೃತಿಯನ್ನು ಮುಗಿಸಿ ವಿಕೃತಿಯನ್ನು [illegible] ಕಾಲವಾಗಿಯೇ ಮಾಡಬೇಕು. (ಒಂದೇ ದಿನದಲ್ಲಿ [illegible].) ಕೃತ್ತಿಕೆಯೇ ಮೊದಲಾಗಿ ವಿಶಾಖೆಯೇ ಕೊನೆಯಾದ [illegible] ನಕ್ಷತ್ರಗಳು ದೇವನಕ್ಷತ್ರಗಳೆಂದು ಹೇಳಲ್ಪಟ್ಟಿವೆ. ಆಗ್ರಯಣದ [illegible] ಪರಿಚ್ಛೇದದಲ್ಲಿ ಹೇಳಲಾಗುವದು. ಅನ್ವಾರಂಭಣೀಯ ಇಷ್ಟಿಯನ್ನು ಚತುರ್ದಶಿಯಲ್ಲಿ ಮಾಡಬೇಕು.

ಇಲ್ಲಿಗೆ ವಿಕೃತಿ[illegible] ಎಂಬ ೩೮ನೇ ಉದ್ದೇಶವು ಮುಗಿದುದು

[ ೩೯ ]

## ಪಶುಯಾಗಕ್ಕೆ ಕಾಲ.

ಪಶುಯಾಗವಾದರೋ ವರ್ಷಋತುವಿನಲ್ಲಿ ಶ್ರಾವಣವೇ ಮೊದಲಾದ ನಾಲ್ಕು ತಿಂಗಳುಗಳ ಯಾವದಾದರೊಂದು ಪರ್ವದಲ್ಲಿ (ಪೂರ್ಣಿಮಾ ಅಮಾವಾಸ್ಯೆಗಳಲ್ಲಿ) ಯಾಗಲೀ, ದಕ್ಷಿಣಾಯನ ದಿನದಲ್ಲಿಯಾಗಲೀ, ಉತ್ತರಾಯಣದಿವಸದಲ್ಲಿಯಾಗಲೀ ಮಾಡಬೇಕು. ಪರ್ವವು ಖಂಡವಾಗಿದ್ದಲ್ಲಿ ವಿಕೃತಿ ಸಾಮಾನ್ಯಕ್ಕೆ ಹೇಳಿದ ನಿರ್ಣಯವನ್ನು ಪರಿಗ್ರಹಿಸಬೇಕು.

ಇಲ್ಲಿಗೆ ಪಶುಯಾಗಕಾಲವೆಂಬ ೩೯ನೆಯ ಉದ್ದೇಶವು ಮುಗಿದುದು.

---

[ ೪೦ ]

## ಚಾತುರ್ಮಾಸ್ಯಕ್ಕೆ ಕಾಲ.

ಚಾತುರ್ಮಾಸ್ಯಪ್ರಯೋಗಗಳಲ್ಲಿ ನಾಲ್ಕು ಪಕ್ಷಗಳು ಇವೆ.

(೧) ಫಾಲ್ಗುಣಮಾಸದ ಅಥವಾ ಚೈತ್ರಮಾಸದ ಪೂರ್ಣಿಮಾದಲ್ಲಿ ವೈಶ್ವದೇವ ಪರ್ವವನ್ನು ಮಾಡಿ ಆಷಾಢ ಪೂರ್ಣಿಮೆಯನ್ನು ಮೊದಲು ಮಾಡಿಕೊಂಡು ಪ್ರತಿಯೊಂದು ನಾಲ್ಕು ತಿಂಗಳಲ್ಲಿಯೂ ಒಂದೊಂದು ಪರ್ವವನ್ನು ಮಾಡುತ್ತಾ ತಾನು ಬದುಕಿರುವವರೆಗೂ ನಡೆಸುವದು **ಯಾವಜ್ಜೀವಪಕ್ಷವು.**

(೨) ಮೇಲೆ ಹೇಳಿದ ಪ್ರಕಾರವೇ ಒಂದು ವರ್ಷ ಪರ್ಯಂತವಾಗಿ ಮಾಡಿ, ಸವನೇಷ್ಟಿಯಿಂದಾಗಲೀ, ಪಶುಯಾಗದಿಂದಾಗಲೀ, ಸೋಮಯಾಗದಿಂದಾಗಲೀ ಮುಗಿಸುವದು ಸಾಂವತ್ಸರಪಕ್ಷವು.

(೩) ಮೊದಲನೆಯ ದಿವಸದಲ್ಲಿ ವೈಶ್ವದೇವಪರ್ವವನ್ನು, ನಾಲ್ಕನೆಯ ದಿವಸದಲ್ಲಿ ವರುಣ, ಪ್ರಘಾಸಪರ್ವವನ್ನು, ಎಂಟು ಒಂಭತ್ತನೆಯ ದಿವಸಗಳಲ್ಲಿ ಸಾಕಮೇಧಪರ್ವವನ್ನೂ, ಹನ್ನೆರಡನೆಯ ದಿವಸ ಶುನಾಸೀರೀಯ ಪರ್ವವನ್ನೂ ಮಾಡಬೇಕೆಂಬುವದು ದ್ವಾದಶಾಹಪಕ್ಷವು.

(೪) ಐದುದಿವಸಗಳಲ್ಲಿ ಮುಗಿಸುವದು ಯಥಾಪ್ರಯೋಗಪಕ್ಷವು.
ಇವುಗಳಲ್ಲಿ ದ್ವಾದಶಾಹಪಕ್ಷ ಮತ್ತು ಯಥಾಪ್ರಯೋಗಪಕ್ಷಗಳನ್ನು ಉತ್ತ

ರಾಯಣದಲ್ಲಿ ಶುಕ್ಲಪಕ್ಷದಲ್ಲಿರುವ ದೇವನಕ್ಷತ್ರಗಳಲ್ಲಾರಂಭಿಸಿ ಶುಕ್ಲಪಕ್ಷದಲ್ಲಿಯೇ ಮುಗಿಸಬೇಕೆಂದು ಬಹು ಜನರ ಅಭಿಪ್ರಾಯವಿದೆ. ಕೃಷ್ಣಪಕ್ಷದಲ್ಲಿಯಾದರೂ ಮುಗಿಸಬಹುದೆಂತ ಕೆಲವರು ಹೇಳುವರು. ದ್ವಾದಶಾಹ, ಪಂಚಾಹಪಕ್ಷಗಳಲ್ಲಿಯೂ, ಸವನೇಷ್ಟಿಯೇ ಮೊದಲಾದವುಗಳಿಂದ ಮುಗಿಸುವದಾದರೆ ಒಂದು ಸಾರಿ ಮಾಡುವದೇ ಸಾಕು. ಇಲ್ಲವಾದರೆ ಪ್ರತಿವರ್ಷದಲ್ಲಿಯೂ ಮಾಡಬೇಕು. ಒಂದೇ ದಿನದಲ್ಲಿ ಪೂರೈಸುವ ಏಕಾಹಿಕಪಕ್ಷವೂ ಒಂದು ಕಡೆಯಲ್ಲಿ ಹೇಳಿದೆ. ಅದು ಚೈತ್ರವೇ ಮೊದಲಾದ ನಾಲ್ಕುಮಾಸಗಳ ಯಾವದಾದರೊಂದು ಪೂರ್ಣಿಮಾದಲ್ಲಿಯಾಗುತ್ತೆ. ಒಂದು ಕಡೆಯಲ್ಲಿ ಏಳು ದಿವಸಗಳಲ್ಲಿ ಮುಗಿಸಬೇಕಾದ ಸಪ್ತಾಹಿಕಪಕ್ಷವೂ ಹೇಳಿದೆ. ಅದರ ಕ್ರಮವೇನಂದರೆ, ಎರಡು ದಿವಸಗಳಲ್ಲಿ ವೈಶ್ವದೇವಪರ್ವವೂ, ಮೂರನೆಯ ದಿವಸ ವರುಣಪ್ರಘಾಸಪರ್ವವೂ, ನಾಲ್ಕನೆಯ ದಿನದಲ್ಲಿ ಗೃಹಮೇಧೀಯವೂ ಐದರಲ್ಲಿ ಮಹಾಹವಿಗಳೂ, ಆರನೆಯ ದಿನದಲ್ಲಿ ಪಿತೃಯಜ್ಞವೇ ಮೊದಲಾದ ಸಾಕಮೇಧಾಪರ್ವದ ಶೇಷವೂ, ಏಳನೆಯ ದಿನ ಶುನಾಸೀರೀಯವೂ ನಡಿಯಬೇಕು. ಇದಕ್ಕೂ ಶುಕ್ಲಪಕ್ಷವೇ ಮೊದಲಾದ ಪಂಚಾಹಪಕ್ಷಕ್ಕೆ ಹೇಳಿದ ಕಾಲವೇ ಎಂದು ತಿಳಿಯತಕ್ಕದ್ದು.

ಇಲ್ಲಿಗೆ ಚಾತುರ್ಮಾಸ್ಯಕಾಲವೆಂಬ ೪೮ನೆಯ
ಉದ್ದೇಶವು ಮುಗಿದುದು.

---

## [ ೪೯ ]

## ಕಾಮ್ಯನೈಮಿತ್ತಿಕಾದಿ ಇಷ್ಟಿಗಳ ನಿರ್ಣಯ.

ಕಾಮ್ಯೇಷ್ಟಿಗಳನ್ನು ವಿಕೃತಿ ಸಾಮಾನ್ಯಕ್ಕೆ ಹೇಳಿದ ನಿರ್ಣಯವನ್ನನುಸರಿಸಿ ಪರ್ವದಲ್ಲಿ ಆಚರಿಸಬೇಕು. ಅಥವಾ ಶುಕ್ಲಪಕ್ಷಗತವಾದ ದೇವನಕ್ಷತ್ರಗಳಲ್ಲಿಯಾಗಲೀ ಆಚರಿಸಬಹುದು. ಜಾತೇಷ್ಟಿಯನ್ನು ಮಾತ್ರಪ್ರಸೂತಳಾದ ಪತ್ನಿಗೆ ಕರ್ಮಕ್ಕೆ ಅಧಿಕಾರವಿಲ್ಲದ ಜನನಾಶೌಚವು ೨೦ರಾತ್ರಿಗಳು ಕಳೆದಮೇಲೆ ಪರ್ವದಲ್ಲಿ ಮಾಡಬೇಕು. ಮನೆಸುಟ್ಟುಹೋದಾಗಮಾಡಬೇಕಾದ ಇಷ್ಟಿಯೇ ಮೊದಲಾದವುಗಳಿಗೆ ಆಯಾಯ ಕಾರಣಗಳು ಒದಗಿದ ಒಡನೆ

ಯೇ ಮಾಡುವದಾದರೆ, ಆಗ ಪರ್ವವನ್ನು ನಿರೀಕ್ಷಿಸಬೇಕಾಗಿಲ್ಲ. ಆಗಲೇ ನಡೆಯದೇ ಇದ್ದಲ್ಲಿ ಪರ್ವದಲ್ಲಿ ಮಾಡಬೇಕು. ಯಜ್ಞಾರ್ಥಗಳಾದ ನಿತ್ಯೇಷ್ಟಿಗಳನ್ನು ಯಜ್ಞದ ಜೊತೆಯಲ್ಲಿಯೇ ಮಾಡಬೇಕು. ಅವಕ್ಕೆ ಬೇರೆ ಕಾಲದ ಅಪೇಕ್ಷೆ ಏನೂ ಇಲ್ಲ. ಹವಿರ್ದೋಷೋದ್ದೇಶಾದಿ ನಿಮಿತ್ತಕಗಳಾದ ಯಜ್ಞಾರ್ಥಗಳಾದ ಇಷ್ಟಿಗಳೋ ಅಂದರೆ, ಸ್ವಿಷ್ಟಕೃತ್ ಆದ ಮೇಲೆ ಸಮಿಷ್ಟಯಜುಸ್ಸಿಗಿಂತ ಮುಂಚಿತವಾಗಿ ನಿಮಿತ್ತಸ್ಮರಣೆಯುಂಟಾದರೆ ಆಗಲೇ ಅದರ ತಂತ್ರವನ್ನು ಉಳಿಸಿಕೊಂಡು ನಿರ್ವಾಪವೇ ಮೊದಲಾದವುಗಳನ್ನು ಮಾಡಬೇಕು. ಅದು ಮುಗಿದ ಮೇಲೆ ಜ್ಞಾಪಕವಾದರೆ ಅದರ ಪ್ರಯೋಗವನ್ನು ಮುಗಿಸಿ ಪುನಃ ಅನ್ವಾಧಾನವೇ ಮೊದಲಾದ ವಿಧಿಪ್ರಕಾರ ಮಾಡಬೇಕು.

---

[ ೪೨ ]

## ಆಧಾನಕ್ಕೆ ಕಾಲ.

ಆಧಾನವು ಪರ್ವದಲ್ಲಿಯೂ, ನಕ್ಷತ್ರದಲ್ಲಿಯೂ ಮಾಡಬಹುದೆಂತ ಹೇಳಿದೆ. ಅದರಲ್ಲಿ ಸಂಕಲ್ಪವನ್ನು ಮೊದಲು ಮಾಡಿಕೊಂಡು ಪೂರ್ಣಾಹುತಿಯು ಮುಗಿಯುವವರೆಗಿನ ಪ್ರಯೋಗಕ್ಕೆ ಸಾಕಾಗುವಷ್ಟು ಕಾಲವಿರುವ ಪರ್ವವನ್ನು ಗ್ರಹಿಸಬೇಕು. ಅಷ್ಟು ಹೊತ್ತು ಇರುವ ಪರ್ವವು ಸಿಕ್ಕದೇ ಹೋದರೆ ಗಾರ್ಹಪತ್ಯಾಗ್ನಿಯ ಆಧಾನ ಮೊದಲು ಮಾಡಿಕೊಂಡು ಆಹವನೀಯಾಗ್ನಿಯ ಆಧಾನವು ಮುಗಿಯುವವರಗಾಗಲೀ ಇರುವ ಪರ್ವವನ್ನು ಗ್ರಹಿಸಬೇಕು. ನಕ್ಷತ್ರನಿರ್ಣಯವೂ ಇದರಂತೆಯೇ ಎಂದು ತಿಳಿಯುವದು. ಪರ್ವವು ಎರಡು ದಿನಗಳಲ್ಲಿಯೂ ಕರ್ಮಕ್ಕೆ ಸಾಕಾಗುವಷ್ಟು ಕಾಲವ್ಯಾಪ್ತಿಯುಳ್ಳದ್ದಾಗಿದ್ದರೆ, ಉಕ್ತವಾದ ನಕ್ಷತ್ರಯೋಗವು ಯಾವ ದಿವಸದಲ್ಲಿರುವದೋ ಆ ದಿನವನ್ನು ಪರಿಗ್ರಹಿಸಬೇಕು. ವಸಂತಋತು, ಪರ್ವ ಮತ್ತು ಹಿಂದೆ ಹೇಳಿದ ನಕ್ಷತ್ರ ಈ ಮೂರು ಸೇರಿದರೆ ಬಹು ಶ್ರೇಷ್ಠವು. ಋತುವು ಸೇರದೆ ಪರ್ವ, ನಕ್ಷತ್ರಗಳೆರಡೇ ಆದಲ್ಲಿ ಮಧ್ಯಮವು. ಕೇವಲ ಪರ್ವದಲ್ಲಿಯೇ ಆಗಲೀ ಕೇವಲ ನಕ್ಷತ್ರದಲ್ಲಿಯೇ ಆಗಲೀ ಮಾಡುವದು ಅಧಮವು.

ಆಶ್ವಲಾಯನ ಸೂತ್ರದಲ್ಲಿ ಕೃತ್ತಿಕೆ, ರೋಹಿಣಿ, ವಿಶಾಖೆ, ಹುಬ್ಬೆ, ಉತ್ತರೆ, ಮೃಗಶಿರ, ಉತ್ತರಾಭಾದ್ರಪದಗಳೆಂಬ ಏಳು ನಕ್ಷತ್ರಗಳು ಉಕ್ತವಾಗಿವೆ. ಕೃತ್ತಿಕೆ, ರೋಹಿಣಿ, ಉತ್ತರೆ, ಉತ್ತರಾಷಾಢೆ, ಉತ್ತರಾಭಾದ್ರಪದ, ಮೃಗಶಿರ, ಪುನರ್ವಸು, ಪುಷ್ಯ, ಹುಬ್ಬೆ, ಪೂರ್ವಾಷಾಢ, ಹಸ್ತ, ಚಿತ್ತೆ, ವಿಶಾಖೆ, ಅನೂರಾಧೆ, ಶ್ರವಣ, ಜ್ಯೇಷ್ಠೆ, ಮತ್ತು ರೇವತಿಗಳೆಂಬ ಈ ನಕ್ಷತ್ರಗಳು ಬೇರೆ ಸೂತ್ರದಲ್ಲಿ ಉಕ್ತವಾಗಿವೆ. ಸೋಮಪೂರ್ವಕವಾದ ಅನ್ವಾಧಾನದಲ್ಲಿಯೋ ಅಂದರೆ "ನರ್ತುಂ ಪೃಚ್ಛೇನ್ನನಕ್ಷತ್ರಂ'' ಋತುವನ್ನಾಗಲಿ ನಕ್ಷತ್ರವನ್ನಾಗಲಿ ಕೇಳಬೇಕಾದುದಿಲ್ಲವೆಂದು ವಚನವಿರುವದರಿಂದ ಸೋಮದ ಕಾಲಕ್ಕೆ ಅನುಸಾರವಾಗಿಯೇ ಆಧಾನ ಮಾಡಬೇಕು. ಅದಕ್ಕಾಗಿ ಪ್ರತ್ಯೇಕ ಕಾಲವಿಚಾರವನ್ನು ಮಾಡಬೇಕಾದುದಿಲ್ಲ.

ಇಲ್ಲಿಗೆ ಅನ್ವಾಧಾನಕಾಲವೆಂಬ ೩ನೆಯ ಉದ್ದೇಶವು ಮುಗಿದುದು.

---

[ ೪೩ ]

## ಅನಂತರ ಗ್ರಹಣ ನಿರ್ಣಯ.

ಚಂದ್ರ ಸೂರ್ಯರ ಗ್ರಹಣಗಳು ಎಷ್ಟು ಹೊತ್ತಿನ ವರೆಗೆ ಕಣ್ಣಿಗೆ ಕಾಣಿಸುವವೋ ಅಷ್ಟು ಹೊತ್ತು ಪುಣ್ಯಕಾಲವಾಗುತ್ತೆ. ಆದ್ದರಿಂದ ಗ್ರಸ್ತಾಸ್ತನಂತರದಲ್ಲಿ ಗ್ರಹಣವು ದ್ವೀಪಾಂತರದಲ್ಲಿದ್ದರೂ ಕಣ್ಣಿನಿಂದ ನೋಡುವದಕ್ಕೆ ಅವಕಾಶವಿಲ್ಲದೆ ಇರುವದರಿಂದ ಅದು ಪುಣ್ಯಕಾಲವಲ್ಲ. ಇದರಂತೆಯೇ ಗ್ರಸ್ತೋದಯದಲ್ಲಿಯೂ, ಉದಯ ಕಾಲಕ್ಕೆ ಮುಂಚಿತವಾಗಿ ಪುಣ್ಯಕಾಲವಲ್ಲ. ಮೋಡಕಟ್ಟಿಕೊಳ್ಳುವದೇ ಮೊದಲಾದ ತಡೆಯಿಂದ ಗ್ರಹಣವು ಕಣ್ಣಿಗೆ ಕಾಣಿಸದೇ ಇದ್ದರೂ ಶಾಸ್ತ್ರದಿಂದ ಹಿಡಿಯುವ ಕಾಲ ಮತ್ತು ಬಿಡುಗಡೆಯಾಗುವ ಕಾಲಗಳನ್ನು ತಿಳಿದು ಸ್ನಾನ-ದಾನಾದಿಗಳನ್ನು ಮಾಡಬೇಕು. ಭಾನುವಾರದಲ್ಲಾಗುವ ಸೂರ್ಯಗ್ರಹಣಕ್ಕೂ ಸೋಮವಾರದಲ್ಲಾಗುವ ಚಂದ್ರಗ್ರಹಣಕ್ಕೂ **ಚೂಡಾಮಣಿ** ಎಂತ ಹೆಸರು. ಈ ಚೂಡಾಮಣಿಗಳಲ್ಲಿ ಮಾಡುವ ಸ್ನಾನ-ದಾನಾದಿಗಳ ಫಲವು ಅಕ್ಷಯವಾಗುವದು. ಗ್ರಹಣವು ಹಿಡಿಯುತ್ತಿರುವಾಗ ಸ್ನಾನವನ್ನೂ

ಮಧ್ಯಕಾಲದಲ್ಲಿ ಹೋಮ, ದೇವತಾರ್ಚನೆ, ಮತ್ತು ಶ್ರಾದ್ಧ ಇವುಗಳನ್ನೂ, ಬಿಡುತ್ತಿರುವಾಗ ದಾನವನ್ನೂ, ಬಿಟ್ಟಮೇಲೆ ಸ್ನಾನವನ್ನೂ ಮಾಡಬೇಕೆಂಬುವದು ಕ್ರಮವು.

## ಗ್ರಹಣ ಸ್ನಾನ ನಿರ್ಣಯ.

ಇಲ್ಲಿ ಸ್ನಾನ ಮಾಡುವ ನೀರಿನಲ್ಲಿ ತಾರತಮ್ಯವಿದೆ. ಹ್ಯಾಗಂದರೆ— ಬಿಸಿನೀರಿಗಿಂತ ತಣ್ಣೀರಿನಲ್ಲಿ ಸ್ನಾನವು ಶ್ರೇಷ್ಠ. ಅದರಲ್ಲಿಯೂ ಯಾರದ್ದಾದರೂ ಹಕ್ಕಿಗೆ ಒಳಪಟ್ಟಿದ್ದಕ್ಕಿಂತ ಯಾರಿಗೂ ಸೇರದಿರುವದು ಶ್ರೇಷ್ಠವು. ಅದರಲ್ಲಿಯೂ, ಪಾತ್ರೆಯಿಂದ ತೆಗೆದುಕೊಂಡು ಹೊಯಿದುಕೊಳ್ಳುವದಕ್ಕಿಂತ ಭೂಮಿಯಲ್ಲಿರುವ ನೀರಿನಲ್ಲಿ ಮುಳುಗುವದು ಶ್ರೇಷ್ಠವು. ಅದಕ್ಕಿಂತ ಹರಿಯುವ ನೀರು, ಅದಕ್ಕಿಂತ ಕೆರೆಯ ನೀರು, ಅದಕ್ಕಿಂತ ನದಿಯ ನೀರು, ಅದಕ್ಕಿಂತ ಋಷಿಗಳಿಂದ ಪರಿಗೃಹೀತವಾದ ನದಿಯ ನೀರು ಅದಕ್ಕಿಂತ ಗಂಗಾನದಿಯ ನೀರು, ಅದಕ್ಕಿಂತ ಸಮುದ್ರದ ನೀರು, ಇವುಗಳು ಶ್ರೇಷ್ಠಗಳಾಗಿವೆ ಗ್ರಹಣದಲ್ಲಿ ಸಚೇಲ (ಧರಿಸಿದ್ದ ಬಟ್ಟೆಗಳೊಂದಿಗೆ) ಸ್ನಾನವನ್ನು ಮಾಡಬೇಕು. ಸಚೇಲ ಸ್ನಾನ ಮಾಡಬೇಕೆಂಬುವದು ಬಿಡುಗಡೇ ಸ್ನಾನದ ವಿಚಾರವೆಂದು ಕೆಲವರು ಹೇಳುತ್ತಾರೆ. ಬಿಡುಗಡೆಯ ಸ್ನಾನವನ್ನು ಮಾಡದಿದ್ದರೆ ಗ್ರಹಣ ಸಂಬಂಧವಾದ ಸೂತಕವು ಹೋಗುವದಿಲ್ಲ. ಗ್ರಹಣದಲ್ಲಿ ಮಂತ್ರವನ್ನು ಹೇಳದೆ ಸ್ನಾನ ಮಾಡಬೇಕು. ಸುಮಂಗಲಿಯರು ತಲೆಗೆ ಸ್ನಾನ ಮಾಡಬೇಕಾಗಿಲ್ಲ. ಆದರೆ ಶಿಷ್ಟರ ಸ್ತ್ರೀಯರು ಗ್ರಹಣದಲ್ಲಿ ತಲೆಗೆ ಸ್ನಾನವನ್ನು ಮಾಡುತ್ತಿದ್ದಾರೆ. ಗ್ರಹಣ ನಿಮಿತ್ತಕವಾದ ಸ್ನಾನದಾನಾದಿಗಳನ್ನು ಜಾತಾಶೌಚ ಮೃತಾಶೌಚಗಳಲ್ಲಿಯೂ ಕೂಡ ಮಾಡಲೇಬೇಕು. ಸ್ತ್ರೀಯು ರಜಸ್ವಲೆಯಾಗಿದ್ದಾಗ ನೈಮಿತ್ತಿಕವಾದ ಸ್ನಾನವು ಒದಗಿದರೆ ಪಾತ್ರೆಯಿಂದ ಪ್ರತ್ಯೇಕಿಸಿದ ನೀರಿನಿಂದ ಅಂದರೆ ಬೇರೇ ಪಾತ್ರೆಗೆ ನೀರು ಹಾಕಿಸಿಕೊಂಡು ಅದರಿಂದ ಸ್ನಾನ ಮಾಡಬೇಕು. ಸ್ನಾನ ಮಾಡಿದ ಬಟ್ಟೆಯನ್ನು ಹಿಂಡಲೂಬಾರದು. ಬೇರೆ ಬಟ್ಟೆಯನ್ನೂ ಧರಿಸಬಾರದು. ಅಂದರೆ ಅದೇ ಒದ್ದೇಬಟ್ಟೆಯಲ್ಲಿಯೇ ಇರಬೇಕು. ಮೂರು ದಿವಸಗಳಾಗಲೀ, ಒಂದು ದಿವಸವಾಗಲೀ ಉಪವಾಸವಿದ್ದು, ಗ್ರಹಣದಲ್ಲಿ ಸ್ನಾನದಾನಾದಿಗಳನ್ನು ಮಾಡುವದರಲ್ಲಿ ಹೆಚ್ಚು ಫಲ ಉಂಟು. ಒಂದೇ ದಿವಸ

ಉಪವಾಸ ಮಾಡುವ ಪಕ್ಷದಲ್ಲಿ ಗ್ರಹಣಕ್ಕೆ ಹಿಂದಿನ ದಿನ ಉಪವಾಸ ಮಾಡಬೇಕೆಂತ ಕೆಲವರು ಹೇಳುವರು. ಗ್ರಹಣ ಇರುವ ಅಹೋರಾತ್ರಿಗಳಲ್ಲಿ ಮಾಡಬೇಕೆಂದು ಮತ್ತೆ ಕೆಲವರು ಹೇಳುವರು. ಪುತ್ರವಂತನಾದ ಗೃಹಸ್ಥನಿಗೆ ಗ್ರಹಣ, ಸಂಕ್ರಾಂತಿ ಇತ್ಯಾದಿಗಳಲ್ಲಿ ಉಪವಾಸವು ನಿಷಿದ್ಧವಾಗಿದೆ. ಇಲ್ಲಿ 'ಪುತ್ರವಂತ' ಎಂಬ ಶಬ್ದದಿಂದ ಹೆಣ್ಣುಮಕ್ಕಳುಳ್ಳ ಗೃಹಸ್ಥನಿಗೂ ಉಪವಾಸವಿಲ್ಲವೆಂದು ಕೆಲವರು ಹೇಳುತ್ತಾರೆ. ಗ್ರಹಣದಲ್ಲಿ ದೇವಪಿತೃತರ್ಪಣವನ್ನು ಮಾಡಬೇಕೆಂದು ಕೆಲವರು ಹೇಳುತ್ತಾರೆ. 'ಗ್ರಹಣದಲ್ಲಿ ಸಕಲ ವರ್ಣದವರಿಗೂ ಸೂತಕವುಂಟಾಗುವದೆ'ಂದು ಹೇಳಿರುವದರಿಂದ ಗ್ರಹಣಕಾಲದಲ್ಲಿ ಮುಟ್ಟಿದ ಬಟ್ಟೆಗಳೇ ಮೊದಲಾದವುಗಳನ್ನು ಒಗಿಯುವದೇ ಮೊದಲಾದವುಗಳಿಂದ ಶುದ್ಧಿಮಾಡಬೇಕು. ಗ್ರಹಣಕಾಲದಲ್ಲಿ ಗೋವು, ಭೂಮಿ, ಹಿರಣ್ಯ, ಧಾನ್ಯಾದಿ ದಾನಮಾಡಿದರೆ ವಿಶೇಷ ಫಲಉಂಟು.

## ದಾನಪಾತ್ರ ವಿಚಾರ.

ತಪಸ್ಸು ಮತ್ತು ವಿದ್ಯಾ ಇವೆರಡೂ ಉಳ್ಳವನು ಮುಖ್ಯವಾಗಿ ದಾನಕ್ಕೆ ಪಾತ್ರನಾಗಿರುತ್ತಾನೆ. ಸತ್ಪಾತ್ರದಲ್ಲಿ ದಾನಮಾಡುವದರಲ್ಲಿ ಪುಣ್ಯವು ಹೆಚ್ಚು. ಇಲ್ಲಿ ಸಂಸ್ಕಾರಾದಿ ರಹಿತನಾದ ಜಾತಿಮಾತ್ರ ಬ್ರಾಹ್ಮಣನಿಗೆ ಮಾಡಿದ ದಾನದಿಂದ ಕ್ಲಪ್ತಫಲವು ದೊರೆಯುವದೆಂದೂ ಗರ್ಭಾದಾನಾದಿಗಳಿಂದ ಸಂಸ್ಕೃತನಾಗಿ ಅಧ್ಯಯನಾಧ್ಯಾಪನಗಳಿಲ್ಲದ ಬ್ರಾಹ್ಮಣ ಬ್ರುವನಿಗೆ ಮಾಡಿದ ದಾನದಿಂದ ಫಲದ್ವಿಗುಣವಾಗುವದೆಂದೂ, ವೇದಾಧ್ಯಯನ ಸಂಪನ್ನನಾದ ಶ್ರೋತ್ರಿಯನಿಗೆಕೊಟ್ಟ ದಾನದಿಂದ ಫಲವುಲಕ್ಷಗುಣವಾಗುವದೆಂದೂ ವಿದ್ಯಾಸದಾಚಾರ ಸಂಪನ್ನನಾದ ಪಾತ್ರನಲ್ಲಿ ಮಾಡಿದದಾನವು ಅಕ್ಷಯವಾಗುವದೆಂದೂ ತಾರತಮ್ಯವನ್ನು ಹೇಳಿರುವದರಿಂದ''ಸೂರ್ಯಚಂದ್ರರ ಗ್ರಹಣಕಾಲದಲ್ಲಿ ಜಲಸಾಮಾನ್ಯವು ಗಂಗಾಜಲಕ್ಕೆ ಸಮಾನವೆಂದೂ, ಬ್ರಾಹ್ಮಣ ಸಾಮಾನ್ಯರು ವ್ಯಾಸ ಸಮಾನರೆಂದೂ, ದಾನ ಸಾಮಾನ್ಯವು ಭೂದಾನ ಸಮವೆಂ''ದೂ ಹೇಳಿರುವ ವಚನವು ಗ್ರಹಣಕಾಲದಲ್ಲಿ ಸ್ನಾನದಾನಾದಿಗಳಿಗೆ ಮಹತ್ವವನ್ನು ಸೂಚಿಸುವ ಅರ್ಥದಲ್ಲಿ ಪರ್ಯವಸನ್ನವಾಗಿರುವದರಿಂದ ಮೇಲೆ ವಿವರಿಸಿರುವ ಪಾತ್ರ ವಿಶೇಷದಲ್ಲಿ ದಾನಮಾಡುವದರಿಂದ ಪುಣ್ಯವು ಹೆಚ್ಚಾಗಿ ಲಭಿಸುವದು. ಗ್ರಹಣದಲ್ಲಿ ಶ್ರಾದ್ಧವನ್ನು ಆಮದಿಂದಾಗಲೀ, ಹಿರಣ್ಯದಿಂದಾಗಲೀ

ಮಾಡಬೇಕು. ಅನುಕೂಲವಿದ್ದರೆ ಪಕ್ವಾನ್ನದಿಂದಲೇ ಮಾಡಬೇಕು. ಸೂರ್ಯ ಗ್ರಹಣದಲ್ಲಿ ತೀರ್ಥಯಾತ್ರಾಂಗ ಶ್ರಾದ್ಧದಂತೆ ಘೃತಪ್ರಧಾನವಾದ ಅನ್ನ ದಿಂದ ಶ್ರಾದ್ಧ ಮಾಡಬೇಕು. ಗ್ರಹಣದಲ್ಲಿ ಶ್ರಾದ್ಧಭೋಜನ ಮಾಡಿದವ ನಿಗೆ ಮಹಾದೋಷವು ಪ್ರಾಪ್ತವಾಗುವದು. ಅನುಕೂಲವುಳ್ಳವನು ಗ್ರಹ ಣದಲ್ಲಿ ತುಲಾದಾನಾದಿಗಳನ್ನು ಮಾಡಬೇಕು.

## ಮಂತ್ರೋಪದೇಶವೇ ಮೊದಲಾದ ವಿಚಾರ.

ಚಂದ್ರಸೂರ್ಯರ ಗ್ರಹಣಕಾಲಗಳಲ್ಲಿ ತೀರ್ಥಗಳು, ಮಹಾಪರ್ವ ಗಳು ಇವೇ ಮೊದಲಾದವುಗಳಲ್ಲಿ ಮಂತ್ರದೀಕ್ಷೆಯನ್ನು ವಹಿಸುವದಕ್ಕೆ (ಮಂತ್ರೋಪದೇಶವನ್ನು ತೆಗೆದುಕೊಳ್ಳುವದಕ್ಕೆ) ಮಾಸ ನಕ್ಷತ್ರವೇ ಮೊದ ಲಾದವುಗಳನ್ನು ನೋಡಬೇಕಾದುದಿಲ್ಲ. ಮಂತ್ರದೀಕ್ಷಾ ಪ್ರಕಾರವನ್ನು ತಂತ್ರಶಾಸ್ತ್ರದಲ್ಲಿ ನೋಡಿ ತಿಳಿಯಬೇಕು. ಇಲ್ಲಿ ದೀಕ್ಷೆ ಎಂತ ಹೇಳಿರುವ ದು ಉಪದೇಶಕ್ಕೂ ಅನ್ವಯಿಸತಕ್ಕದ್ದಾಗಿದೆ. ಕೃತ ತ್ರೇತಾ ದ್ವಾಪರ ಯುಗಗಳಲ್ಲಿ 'ದೀಕ್ಷೆ' ಎಂತ ಇತ್ತು. ಕಲಿಯುಗಗಲ್ಲಿ ಆ ಸ್ಥಾನಕ್ಕೆ 'ಉಪದೇಶ' ವೆಂತ ಆಗಿದೆ. ಚಂದ್ರಸೂರ್ಯರ ಗ್ರಹಣಕಾಲಗಳಲ್ಲಿಯೂ ತೀರ್ಥಗಳಲ್ಲಿಯೂ, ಸಿದ್ಧಿಕ್ಷೇತ್ರಗಳಲ್ಲಿಯೂ, ಈಶ್ವರಾಲಯಗಳಲ್ಲಿಯೂ, ಮಂತ್ರಮಾತ್ರವನ್ನು ಹೇಳಿಕೊಡುವದಕ್ಕೆ **ಉಪದೇಶ**ವೆಂತ ಹೆಸರು. ಚಂದ್ರಗ್ರಹಣದಲ್ಲಿ ಉಪದೇಶ ತೆಗೆದುಕೊಂಡರೆ, ದಾರಿದ್ರ್ಯ ಮೊದಲಾದ ದೋಷವುಂಟಾಗುವದೆಂತ ವಚನವಿರುವದರಿಂದ ಮಂತ್ರೋಪದೇಶ ತೆಗೆದು ಕೊಳ್ಳುವದಕ್ಕೆ ಸೂರ್ಯಗ್ರಹಣವೇ ಮುಖ್ಯವೆಂತ ಕೆಲವರು ಹೇಳುತ್ತಾರೆ. ಚಂದ್ರಸೂರ್ಯಗ್ರಹಣಗಳಲ್ಲಿ ಗ್ರಹಣಕ್ಕೆ ಮುಂಚೆಯೂ ಉಪವಾಸವಿದ್ದು, ಸ್ನಾನಮಾಡಿ ಗ್ರಹಣ ಹಿಡಿದಾರಭ್ಯ ಬಿಡುಗಡೆಯಾಗುವವರಿಗೂ ಅದೇ ಮನ ಸ್ಸಿನಿಂದ ಮಂತ್ರವನ್ನು ಜಪಿಸಬೇಕು. ಹೀಗೆ ಜಪಮಾಡಿದನಂತರ ಎಷ್ಟು ಜಪ ಮಾಡಿರುತ್ತಾನೋ ಅದರ ಹತ್ತನೇ ಒಂದು ಭಾಗ ಹೋಮವನ್ನೂ, ಹೋಮಸಂಖ್ಯೆಯ ಹತ್ತನೇ ಒಂದು ಭಾಗ ತರ್ಪಣವನ್ನೂ ಮಾಡಬೇಕು. ಹೋಮ ಮಾಡುವದಕ್ಕೆ ಶಕ್ತಿಯಿಲ್ಲದಿದ್ದರೆ ಎಷ್ಟು ಹೋಮ ಮಾಡಬೇಕೋ ಅದಕ್ಕೆ ನಾಲ್ಕರಷ್ಟು ಜಪವನ್ನೇ ಮಾಡಬೇಕು. ಮೂಲಮಂತ್ರವನ್ನು ಹೇಳಿ ಅದರ ಕೊನೆಯಲ್ಲಿ ದ್ವಿತೀಯಾನ್ತವಾಗಿ ಮಂತ್ರದೇವತೆಯ ಹೆಸರನ್ನು

ಹೇಳಿ, 'ಅಮುಕಾಂ ದೇವತಾಂ ತರ್ಪಯಾಮಿನಮಃ' ಎಂದು ಹೇಳುತ್ತಾ ಯವವೇ ಮೊದಲಾದವುಗಳಿಂದ ಕೂಡಿದ ಉದಕಾಂಜಲಿಗಳಿಂದ ಹೋಮ ಸಂಖ್ಯೆಯ ಹತ್ತನೇ ಒಂದು ಪಾಲು ತರ್ಪಣವನ್ನು ಮಾಡಬೇಕು. ಹೀಗೆಯೇ ಕೊನೆಯಲ್ಲಿ 'ನಮಃ' ಎಂಬ ಶಬ್ದದಿಂದ ಕೂಡಿದ ಮೂಲಮಂತ್ರವನ್ನುಚ್ಚರಿಸಿ, 'ಅಮುಕಾಂ ದೇವತಾಮಹಮಭಿಷಿಂಚಾಮ್ಯನೇನ' ಎಂದು ಹೇಳುತ್ತಾ ನೀರಿನಿಂದ ತನ್ನ ತಲೆಯಮೇಲೆ ಮಾರ್ಜನೆಯನ್ನು ತರ್ಪಣಸಂಖ್ಯೆಯ ಹತ್ತನೇ ಒಂದು ಪಾಲು ಮಾಡಿಕೊಳ್ಳಬೇಕು. ಮಾರ್ಜನೆ ಸಂಖ್ಯೆಯ ಹತ್ತನೇ ಒಂದು ಪಾಲು ಬ್ರಾಹ್ಮಣರ ಭೋಜನವನ್ನು ಮಾಡಿಸಬೇಕು. ಹೀಗೆ ಪುರಶ್ಚರಣೆಯು ಜಪ, ಹೋಮ, ತರ್ಪಣ, ಮಾರ್ಜನ ಮತ್ತು ಬ್ರಾಹ್ಮಣಭೋಜನಗಳೆಂಬ ಐದು ಪ್ರಕಾರವಾಗಿದೆ. ತರ್ಪಣಾದಿಗಳನ್ನು ಮಾಡುವದಕ್ಕೆ ಆಗದೇ ಇದ್ದರೆ ಆಯಾಯ ಸಂಖ್ಯೆಗೆ ನಾಲ್ಕರಷ್ಟು ಜಪವನ್ನೇ ಮಾಡಬೇಕು. ಗ್ರಹಣದಲ್ಲಿ ಪುರಶ್ಚರಣೆ ಮಾಡುವ ಈ ರೀತಿಯು ಗ್ರಸ್ತಾಸ್ತ ಮತ್ತು ಗ್ರಸ್ತೋದಯಗಳಲ್ಲಿ ಇಲ್ಲ. ಪುರಶ್ಚರಣೆಯ ಅಂಗವಾದ ಉಪವಾಸವನ್ನು ಮಕ್ಕಳುಳ್ಳ ಗೃಹಸ್ಥನೂ ಮಾಡಬೇಕು. ಪುರಶ್ಚರಣೆಯನ್ನು ಮಾಡುವವನಿಗೆ ಸ್ನಾನದಾನಾದಿ ನೈಮಿತ್ತಿಕ ಕರ್ಮಗಳು ಲೋಪವಾಗುವದರಲ್ಲಿ ಪ್ರತ್ಯವಾಯವು ಉಂಟಾಗುವದರಿಂದ ನೈಮಿತ್ತಿಕಗಳಾದ ಸ್ನಾನದಾನಾದಿಗಳನ್ನು ಹೆಂಡತಿ-ಮಗ ಇವರೇ ಮೊದಲಾದವರಿಂದ ಮಾಡಿಸಬೇಕು.

## ಪುರಶ್ಚರಣೆಯ ವಿಧಿ.

ಇಲ್ಲಿ ಮಾಡಬೇಕಾದ ಕ್ರಮ ಹೇಗಂದರೆ—ಗ್ರಹಣವು ಸ್ಪರ್ಶವಾಗುವದಕ್ಕೆ ಮುಂಚಿತವಾಗಿಯೇ ಸ್ನಾನ ಮಾಡಿ, "ಅಮುಕ* ಗೋತ್ರೋ ಅಮುಕಶರ್ಮಾಹಂ ರಾಹುಗ್ರಸ್ತೆ ದಿವಾಕರೆ ನಿಶಾಕರೇವಾ ಅಮುಕ ದೇವತಾಯಾ ಅಮುಕ ಮಂತ್ರ ಸಿದ್ಧಿ ಕಾಮಃಗ್ರಾಸಾದಿ ಮುಕ್ತಿ ಪರ್ಯಂ

* ಈ ಗೋತ್ರದ ಈ ಹೆಸರುಳ್ಳ ನಾನು ಸೂರ್ಯ ಅಥವಾ ಚಂದ್ರ ಗ್ರಹಣದಲ್ಲಿ ಈ ದೇವತೆಗೆ ಸಂಬಂಧಪಟ್ಟ ಈ ಮಂತ್ರದಸಿದ್ಧಿಯನ್ನು ಹೊಂದಲಪೇಕ್ಷೆಯುಳ್ಳವನಾಗಿ ಗ್ರಹಣವು ಹಿಡಿದದ್ದು ಮೊದಲು ಬಿಡುವ ಪರ್ಯಂತವಾಗಿಯೂ, ಈ ಮಂತ್ರದ ಜಪರೂಪವಾದ ಪುರಶ್ಚರಣೆಯನ್ನು ಮಾಡುತ್ತೇನೆ.

ತಂ ಅಮುಕ ಮಂತ್ರಸ್ಯ ಜಪರೂಪಂ ಪುರಶ್ಚರಣಂ ಕರಿಷ್ಯೇ'' ಎಂದು ಸಂಕಲ್ಪ ಮಾಡಿ ಆಸನಬಂಧ ನ್ಯಾಸವೇ ಮೊದಲಾದವುಗಳನ್ನೆಲ್ಲಾ ಸ್ಪರ್ಶಕ್ಕಿಂತ ಮುಂಚಿತವಾಗಿಯೇ ಮಾಡಿಕೊಂಡಿದ್ದು ಸ್ಪರ್ಶಾರಭ್ಯ ಮೋಕ್ಷವಾಗುವ ಪರ್ಯಂತವಾಗಿಯೂ ಮೂಲ ಮಂತ್ರ ಜಪವನ್ನು ಮಾಡಬೇಕು. ಅನಂತರ ಮಾರನೆಯ ದಿವಸ ಸ್ನಾನವೇ ಮೊದಲಾದ ನಿತ್ಯ ಕರ್ಮಗಳನ್ನು ಮಾಡಿ, "ಅಮುಕ*ಮಂತ್ರಸ್ಯ ಕೃತೈತದ್ಗ್ರಹಣ ಕಾಲಿಕ ಅಮುಕ ಸಂಖ್ಯಾಕ ಪುರಶ್ಚರಣ ಜಪಸಾಂಗತಾರ್ಥಂ ತದ್ದಶಾಂಶ ಹೋಮ, ತದ್ದಶಾಂಶ ತರ್ಪಣ, ತದ್ದಶಾಂಶ ಮಾರ್ಜನ, ತದ್ದಶಾಂಶ ಬ್ರಾಹ್ಮಣ ಭೋಜನಾನಿ ಕರಿಷ್ಯೇ'' ಎಂದು ಸಂಕಲ್ಪ ಮಾಡಿ ಹೋಮಾದಿಗಳನ್ನಾಗಲೀ ಅಥವಾ ಅದಕ್ಕೆ ನಾಲ್ಕರಷ್ಟೋ ಎರಡರಷ್ಟೋ ಜಪವನ್ನಾಗಲೀ ಮಾಡಬೇಕು. (ಪುರಶ್ಚರಣೆ ಮಾಡತಕ್ಕವನು ಪ್ರತಿನಿಧಿಗಳ ಮೂಲಕ ಗ್ರಹಣನಿಮಿತ್ತ ಸ್ನಾನ ದಾನಾದಿಗಳನ್ನು ಮಾಡಿಸಲೇ ಬೇಕೆಂದು ಹೇಳಿದೆಯಷ್ಟೆ? ಅದರಂತೆ) ಅವನಿಂದ ಪ್ರೇರಿತರಾದ ಮಗನೇ ಮೊದಲಾದವರು ಗ್ರಹಣಕಾಲದಲ್ಲಿ "ಅಮುಕ § ಶರ್ಮಣೋ ಅಮುಕ ಗೋತ್ರಸ್ಯ ಅಮುಕ ಗ್ರಹಣ ಸ್ನಾನ ಜನಿತ ಶ್ರೇಯಃ ಪ್ರಾಪ್ತ್ಯರ್ಥಂ ಸ್ಪರ್ಶ ಸ್ನಾನಂಕರಿಷ್ಯೇ'' ಇತ್ಯಾದಿ ಸಂಕಲ್ಪಪೂರ್ವಕವಾಗಿ ಅವನ ಸಂಬಂಧವಾದ ಸ್ನಾನ ದಾನಾದಿಗಳನ್ನು ಮಾಡಬೇಕು. ಪುರಶ್ಚರಣೆಯನ್ನು ಮಾಡದವರೂ ಕೂಡ ಗುರುವಿನಿಂದ ಉಪದೇಶ ಹೊಂದಿರುವ ತಮ್ಮ ತಮ್ಮ ಇಷ್ಟ ದೇವತಾ ಮಂತ್ರಗಳನ್ನೂ ಗಾಯಿತ್ರೀ ಮಂತ್ರವನ್ನೂ ಗ್ರಹಣಕಾಲದಲ್ಲಿ ಅವಶ್ಯವಾಗಿ ಜಪಿಸಬೇಕು. ಹಾಗೆ ಜಪ ಮಾಡದಿದ್ದರೆ ಮಂತ್ರಕ್ಕೆ ಮಾಲಿನ್ಯ ಉಂಟಾಗುತ್ತೆ. ಗ್ರಹಣ

---

* ಈ ಗ್ರಹಣ ಕಾಲದಲ್ಲಿ ಮಾಡಿದ ಈ ಮಂತ್ರದ ಇಷ್ಟು ಸಂಖ್ಯೆಯುಳ್ಳ ಪುರಶ್ಚರಣರೂಪವಾದ ಜಪವು ಸಾಂಗವಾಗುವದಕ್ಕಾಗಿ ಅದರ ದಶಾಂಶ ಹೋಮ ಅದರ ದಶಾಂಶ ತರ್ಪಣ ಅದರ ದಶಾಂಶ ಮಾರ್ಜನೆ ಅದರ ದಶಾಂಶ ಬ್ರಾಹ್ಮಣಭೋಜನ ಇವುಗಳನ್ನು ನಡಿಸುತ್ತೇನೆ.

§ ಈ ಗೋತ್ರದವನಾದ ಈ ಹೆಸರುಳ್ಳ ಈತನಿಗೆ ಈ ಗ್ರಹಣ ಸ್ನಾನದಿಂದುಂಟಾಗುವ ಪುಣ್ಯವು ಲಭಿಸುವದಕ್ಕಾಗಿ (ನಾನು) ಸ್ಪರ್ಶ ಸ್ನಾನವನ್ನು ಮಾಡುತ್ತೇನೆ.

ಕಾಲದಲ್ಲಿ ಮಲಗಿದ್ದರೆ ರೋಗವೂ, ಮೂತ್ರ ವಿಸರ್ಜನೆ ಮಾಡಿದರೆ ದಾರಿದ್ರ್ಯವೂ ಉಂಟಾಗುವವು. ಮಲ ವಿಸರ್ಜನೆ ಮಾಡಿದರೆ ಕ್ರಿಮಿಯೂ, ಮೈಥುನ ಮಾಡಿದರೆ ಊರ ಹಂದಿಯೂ, ಅಭ್ಯಂಗ ಸ್ನಾನ ಮಾಡಿದರೆ ಕುಷ್ಠರೋಗಿಯೂ ಆಗುತ್ತಾನೆ. ಊಟ ಮಾಡಿದರೆ ನರಕವಾಗುವದು.

## ಗ್ರಹಣಕಾಲದಲ್ಲಿ ಬಿಡಬೇಕಾದದ್ದು.

ಗ್ರಹಣಕ್ಕಿಂತ ಮುಂಚಿತವಾಗಿಯೇ ಪಕ್ವ ಮಾಡಿದ ಅನ್ನವನ್ನು ಗ್ರಹಣಾನಂತರದಲ್ಲಿ ಬಿಡಬೇಕು. ಹೀಗೆಯೇ ಗ್ರಹಣಕಾಲದಲ್ಲಿದ್ದ ನೀರನ್ನು ಕುಡಿಯುವದರಲ್ಲಿಯೂ ಪಾದಕೃಚ್ಛ್ರ ಪ್ರಾಯಶ್ಚಿತ್ತವನ್ನು ಹೇಳಿರುವದರಿಂದ ಗ್ರಹಣಕಾಲದಲ್ಲಿದ್ದ ನೀರನ್ನೂ ಕುಡಿಯಬಾರದು. ಗ್ರಹಣಕಾಲಕ್ಕಿಂತ ಮುಂಚಿತವಾಗಿಯೇ ಸಿದ್ಧವಾಗಿದ್ದ ಗಂಜಿ, ಮಜ್ಜಿಗೆ, ತುಪ್ಪದಿಂದಾಗಲೀ ಎಣ್ಣೆಯಿಂದಾಗಲೀ ಪಕ್ವ ಮಾಡಿದ ಪದಾರ್ಥಗಳು, ಹಾಲು, ಮೊಸರು, ತುಪ್ಪ ಉಪ್ಪಿನಕಾಯಿ, ಮುಂತಾದ ಪದಾರ್ಥಗಳನ್ನು ಗ್ರಹಣ ಕಾಲದಲ್ಲಿ ದರ್ಭೆಯಿಂದ ಮುಚ್ಚಿದ್ದು ಗ್ರಹಣಾನಂತರದಲ್ಲಿ ಪರಿಗ್ರಹಿಸಬಹುದು.

## ಅನಂತರ ಗ್ರಹಣ ವೇಧೆಯ ವಿಚಾರ.

ಸೂರ್ಯಗ್ರಹಣದಲ್ಲಿ ಗ್ರಹಣವಾಗುವದಕ್ಕೆ ಹಿಂದೆ ನಾಲ್ಕು ಯಾಮಗಳೂ ಚಂದ್ರಗ್ರಹಣದಲ್ಲಿ ಮೂರು ಯಾಮಗಳೂ ವೇಧೆಯುಂಟು. ಹೇಗೆಂದರೆ—ಸೂರ್ಯಗ್ರಹಣವು ಹಗಲಿನ ಮೊದಲನೆಯ ಯಾಮದಲ್ಲಾದಾಗ ಹಿಂದಿನ ರಾತ್ರಿಯ ನಾಲ್ಕು ಯಾಮಗಳಲ್ಲಿಯೂ, ಎರಡನೇ ಯಾಮವೇ ಮೊದಲಾದವುಗಳಲ್ಲಾದಾಗ ಹಿಂದಿನ ರಾತ್ರಿಯ ಎರಡನೆಯ ಯಾಮವೇ ಮೊದಲಾದವುಗಳಲ್ಲಿಯೂ ಊಟ ಮಾಡಬಾರದು. ಇದರಂತೆಯೇ ಚಂದ್ರಗ್ರಹಣವು ರಾತ್ರಿಯ ಮೊದಲನೆಯ ಯಾಮದಲ್ಲಾದಾಗ ಆ ಹಗಲಿನ ಎರಡನೆಯ ಯಾಮದಲ್ಲಿ ಭೋಜನ ಮಾಡಬಾರದು. ರಾತ್ರಿಯ ಎರಡನೇ ಯಾಮವೇ ಮೊದಲಾದವುಗಳಲ್ಲಿ ಗ್ರಹಣವಾದಾಗ ಆ ಹಗಲಿನ ಮೂರನೆಯ ಯಾಮವೇ ಮೊದಲಾದವುಗಳಲ್ಲಿ ಭೋಜನ ಮಾಡಬಾರದು. ಹುಡುಗರು, ಮುದುಕರು, ರೋಗಿಗಳು ಇವರ ವಿಷಯದಲ್ಲಿ ವೇಧೆಯು ಒಂದೂವರೆ ಯಾಮ (೪|| ಗಂಟೆಯ ಕಾಲ) ಅಥವಾ ಮೂರು

ಮುಹೂರ್ತ (೨ ಗಂಟೆ ೨೪ ಮಿನಿಟ್) ವೆಂದು ತಿಳಿಯಬೇಕು. ಶಕ್ತ ನಾದವನು ವೇಧೆ ಇರುವ ಕಾಲದಲ್ಲಿ ಭೋಜನ ಮಾಡಿದರೆ, ಮೂರು ದಿವಸ ಉಪವಾಸ ಮಾಡುವದು ಪ್ರಾಯಶ್ಚಿತ್ತವಾಗಿರುತ್ತೆ. ಗ್ರಹಣ ಕಾಲದಲ್ಲಿ ಊಟ ಮಾಡಿದರೆ ಪ್ರಾಜಾಪತ್ಯ ಕೃಛ್ರವನ್ನು ಮಾಡಬೇಕು. ಗ್ರಸ್ತೋದಯವಾಗುವ ಚಂದ್ರಗ್ರಹಣದಲ್ಲಿ ಮಾತ್ರ ವೇಧೆಯು ನಾಲ್ಕು ಯಾಮವಿರುವದರಿಂದ ಆ ಹಗಲಿನಲ್ಲಿ ಊಟ ಮಾಡಕೂಡದು. ಚಂದ್ರ ಮಂಡಲವು ಸಂಪೂರ್ಣವಾಗಿ ಗ್ರಾಸವಾದಾಗ ವೇಧೆಯು ನಾಲ್ಕು ಯಾಮವೆಂತಲೂ, ಕೆಲವು ಭಾಗ ಗ್ರಾಸದಲ್ಲಿ ಮೂರು ಯಾಮ ವೇಧೆಯೆಂತಲೂ ಕೆಲವರು ಹೇಳುತ್ತಾರೆ. ಗ್ರಸ್ತಾಸ್ತದಲ್ಲಿಯೋ ಅಂದರೆ—"ಗ್ರಸ್ತಾವೇವಾಸ್ತಮಾನಂತು ರವೀಂದೂ ಪ್ರಾಪ್ನುತೋಯದಿ || ಪರೇದ್ಯುರುದಯೇ ಸ್ನಾತ್ವಾ ಶುದ್ಧೋಭ್ಯವಹರೇನ್ನರಃ" || ಸೂರ್ಯ-ಚಂದ್ರರು ಗ್ರಸ್ತರಾಗಿರುವಾಗಲೇ ಅಸ್ತಂಗತರಾದರೆ ಮಾರನೆಯ ದಿವಸ ಅವರು ಉದಯವಾದ ಮೇಲೆ ಸ್ನಾನಮಾಡಿ ಶುದ್ಧನಾಗಿ ಭೋಜನಮಾಡಬೇಕು. ಇಲ್ಲಿ'ಸ್ನಾನ ಮಾಡಿ ಶುದ್ಧನಾಗಿ' ಎಂದು ಹೇಳಿರುವದರಿಂದ ಶುದ್ಧಮಂಡಲವನ್ನು ನೋಡಿದ ಕಾಲದಲ್ಲಿ ಮಾಡುವ ಸ್ನಾನಕ್ಕೆ ಮುಂಚೆ ಶುದ್ಧನಾಗಿರುವದಿಲ್ಲ ವೆಂದು ತೋರಿಸುವದರಿಂದ ಶುದ್ಧಬಿಂಬವು ಉದಯವಾದ ಮೇಲೆ ಮಾಡುವ ಸ್ನಾನಕ್ಕೆ ಮುಂಚೆ, ನೀರು ತರುವದನ್ನೂ ಅಡಿಗೆ ಮಾಡುವದನ್ನೂ ಸಹಾ ಮಾಡಕೂಡದೆಂದು ತೋರುತ್ತೆ". (ಎಂದು ಧರ್ಮಸಿಂಧುಕಾರರು ತಮ್ಮ ಅಭಿಪ್ರಾಯವನ್ನು ಸೂಚಿಸಿರುತ್ತಾರೆ) ಸೂರ್ಯನ ಗ್ರಸ್ತಾಸ್ತವೇ ಮೊದಲಾದದುದರಲ್ಲಿ ಮಕ್ಕಳುಳ್ಳ ಗೃಹಸ್ಥನಿಗೆ ಉಪವಾಸವು ನಿಷೇಧವಾಗಿರುವದರಿಂದ ಗ್ರಹಣಕ್ಕೆ ಮುಂಚೆ ವೇಧೆಯುಳ್ಳ ಆರು ಮುಹೂರ್ತವನ್ನು (೧೨ ಗಳಿಗೆಯ ಕಾಲ) ಬಿಟ್ಟು ಊಟ ಮಾಡಬೇಕೆಂದು ಕೆಲವರು ಹೇಳುತ್ತಾರೆ. ಮಕ್ಕಳುಳ್ಳ ಗೃಹಸ್ಥನೂ ಕೂಡ ಈ ಸಂದರ್ಭದಲ್ಲಿ ಉಪವಾಸವನ್ನೇ ಮಾಡಬೇಕೆಂದು ಹೇಳಿರುವ ಮಾಧವಾಚಾರ್ಯರ ಅಭಿಪ್ರಾಯವೇ ಶಿಷ್ಟರಿಂದ ಅನುಸರಿಸಲ್ಪಟ್ಟು ಯುಕ್ತವಾಗಿದೆ. ಆಹಿತಾಗ್ನಿಯು ಸೂರ್ಯನ ಗ್ರಸ್ತಾಸ್ತದಲ್ಲಿಯೂ, ಚಂದ್ರನ ಗ್ರಸ್ತೋದಯದಲ್ಲಿಯೂ ಕೂಡ ಅನ್ವಾಧಾನವನ್ನು ಮಾಡಿ, ಉದಕದಿಂದ ವ್ರತವನ್ನು

ಮುಗಿಸಬೇಕಲ್ಲದೆ, ಭೋಜನವನ್ನು ಮಾಡಕೂಡದು. ಚಂದ್ರಗ್ರಸ್ತಾಸ್ತದಲ್ಲಿ ಮಾರನೆಯ ದಿನದಲ್ಲಿ ಸಂಧ್ಯಾಹೋಮಾದಿಗಳನ್ನು ಮಾಡುವದರಲ್ಲಿ ದೋಷ ವಿಲ್ಲ. ಆದರೆ ಬಿಡುಗಡೆಯು ಸ್ವಲ್ಪ ಹೊತ್ತಿನೊಳಗಾಗಿ ಆಗುವದಾಗಿ ಶಾಸ್ತ್ರಮುಖೇನ ತಿಳಿದುಬಂದಲ್ಲಿ ಬಿಡುಗಡೆಯಾದ ಮೇಲೆ (ಅಷ್ಟು ಹೊತ್ತಿನ ಮೇಲೆ) ಸ್ನಾನ ಮಾಡಿ ಹೋಮಾದಿಗಳನ್ನು ಮಾಡಬೇಕು. ಬಹಳ ಹೊತ್ತಿನ ಮೇಲೆ ಬಿಡುಗಡೆಯಾಗುವದಾದರೆ ಹೋಮಕಾಲವು ಮೀರಿ ಹೋಗುವದರಿಂದ ಗ್ರಸ್ತೋದಯದಂತೆ ಗ್ರಹಣ ಮಧ್ಯದಲ್ಲಿಯೇ ಸಂಧ್ಯಾವಂದನೆಯನ್ನೂ, ಹೋಮವನ್ನೂ, ಮಾಡಿ ಶಾಸ್ತ್ರದಿಂದ ತಿಳಿದು ಬರುವ ಬಿಡುಗಡೆಯ ಕಾಲದಲ್ಲಿ ಸ್ನಾನ ಮಾಡಿ ಬ್ರಹ್ಮಯಜ್ಞವೇ ಮೊದಲಾದ ನಿತ್ಯಕರ್ಮಗಳನ್ನು ಮಾಡಬೇಕೆಂದು ತೋರುತ್ತೆ. ಅಮಾವಾಸ್ಯೆಯಲ್ಲಿ ಗ್ರಹಣ ನಿಮಿತ್ತಕ ಶ್ರಾದ್ಧವನ್ನು ಮಾಡುವದರಿಂದಲೇ ದರ್ಶಶ್ರಾದ್ಧ, ಸಂಕ್ರಾಂತಿ ಶ್ರಾದ್ಧಗಳೂ ಚರಿತಾರ್ಥ*ಗಳಾಗುವವು.

ಗ್ರಹಣದಿನದಲ್ಲಿ ತಂದೆ ತಾಯಿಗಳ ಕಾಲಶ್ರಾದ್ಧವು ಬಂದರೆ ನಿರ್ಣಯ:—

ಗ್ರಹಣ ದಿನದಲ್ಲಿ ತಂದೆತಾಯಿಗಳ ಕಾಲಶ್ರಾದ್ಧವು ಬಂದರೆ ಅನುಕೂಲವಿದ್ದರೆ ಅನ್ನದಿಂದಲೇ ಮಾಡಬೇಕು. ಬ್ರಾಹ್ಮಣರೇ ಮೊದಲಾದವರು ದೊರೆಯದೇ ಇದ್ದಲ್ಲಿ ಆಮದಿಂದಾಗಲೀ ಹಿರಣ್ಯದಿಂದಾಗಲೀ ಮಾಡಬೇಕು.

ಗ್ರಹಣವು ತನ್ನ ಜನ್ಮರಾಶಿಗೆ ಮೂರನೇ, ಆರನೇ, ಹತ್ತನೇ, ಹನ್ನೊಂದನೆಯ ರಾಶಿಗಳಲ್ಲಾದರೆ ಶುಭಫಲವೂ ಎರಡನೇ, ಏಳನೇ, ಐದನೇ, ಒಂಭತ್ತನೇರಾಶಿಗಳಲ್ಲಾದರೆ ಮಧ್ಯಮಫಲವೂ, ಒಂದನೇ, ನಾಲ್ಕನೇ, ಎಂಟನೇ, ಹನ್ನೆರಡನೇ ರಾಶಿಗಳಲ್ಲಾದರೆ ನೀಚಫಲವೂ ಆಗುವದು. ಯಾವನ ಜನ್ಮರಾಶಿ ಜನ್ಮನಕ್ಷತ್ರಗಳಲ್ಲಿ ಗ್ರಹಣವಾಗುವದೋ ಅವನಿಗೆ ಹೆಚ್ಚು ಅನಿಷ್ಟ ಫಲವುಂಟು. ಆದುದರಿಂದವನು ಗಾರ್ಗ್ಯರೇ ಮೊದಲಾದವರು ಹೇಳಿದ ಶಾಂತಿಯನ್ನಾಗಲೀ, ಬಿಂಬದಾನವನ್ನಾಗಲೀ ಮಾಡಬೇಕು.

## ಬಿಂಬದಾನಕ್ರಮ

ಚಂದ್ರಗ್ರಹಣದಲ್ಲಿ ಬೆಳ್ಳಿಯ ಚಂದ್ರಬಿಂಬವನ್ನೂ ಚಿನ್ನದಿಂದ ಹಾವಿನ

* ಈ ವಿಷಯದಲ್ಲಿ ಮತಾಂತರವು ಮೂರನೆಯ ಪರಿಚ್ಛೇದದ ಉತ್ತರಾರ್ಧದಲ್ಲಿ ಹೇಳಿದೆ.

ಪ್ರತಿಮೆಯನ್ನೂ ಮಾಡಿಸಿ ಸೂರ್ಯಗ್ರಹಣವಾದರೆ ಸೂರ್ಯಬಿಂಬ ಮತ್ತು ನಾಗಬಿಂಬವನ್ನೂ ಸಹಾ ಚಿನ್ನದಿಂದಲೇ ಮಾಡಿಸಿ, ತುಪ್ಪದಿಂದ ತುಂಬಿದ ತಾಮ್ರದ ಅಥವಾ ಕಂಚಿನಪಾತ್ರೆಯಲ್ಲಿಟ್ಟು ಎಳ್ಳು, ವಸ್ತ್ರ, ದಕ್ಷಿಣೆ ಇವುಗಳನ್ನು ಸಿದ್ಧಪಡಿಸಿಕೊಂಡು "ಮಮ† ಜನ್ಮರಾಶಿ ಜನ್ಮನಕ್ಷತ್ರಸ್ಥಿತಾಮುಕಗ್ರಹಣ ಸೂಚಿತ ಸರ್ವಾರಿಷ್ಟಪ್ರಶಾಂತಿ ಪೂರ್ವಕಂ ಏಕಾದಶಸ್ಥಾನಸ್ಥಿತಗ್ರಹಣ ಸೂಚಿತ ಶುಭಫಲಾಪ್ತಯೇ ಬಿಂಬದಾನಂ ಕರಿಷ್ಯೇ" ಎಂದು ಸಂಕಲ್ಪ ಮಾಡಿ ಸೂರ್ಯನನ್ನೂ ಚಂದ್ರನನ್ನೂ ರಾಹುವನ್ನೂ ಸಹ ಧ್ಯಾನಮಾಡಿ ನಮಸ್ಕರಿಸಿ (ಅಂದರೆ ಧ್ಯಾನಾದಿ ನಮಸ್ಕಾರಾಂತವಾಗಿ ಪೂಜೆಮಾಡಿ) ಅನಂತರ "ತಮೋಮಯ ಮಹಾ* ಭೀಮ ಸೋಮ ಸೂರ್ಯವಿಮರ್ದನ|| ಹೇಮತಾರಾ ಪ್ರದಾನೇನ ಮಮಶಾಂತಿ ಕರೋ ಭವ||ವಿಧುಂತುದ ನಮಸ್ತುಭ್ಯಂ ಸಿಂಹಿಕಾನಂದನಾಚ್ಯುತ||ದಾನೇನಾನೇನ ನಾಗಸ್ಯ ರಕ್ಷ ಮಾಂವೇಧಜಾದ್ಭಯಾತ್"||ಎಂಬ ಮಂತ್ರವನ್ನುಚ್ಚರಿಸಿ, "ಇದಂ§ಸೌವರ್ಣಂ ರಾಹುಬಿಂಬಂ ನಾಗಂ ಸೌವರ್ಣಂ ರವಿಬಿಂಬಂ ರಾಜತಂ ಚಂದ್ರಬಿಂಬಂವಾ. ಘೃತಪೂ

---

† ನನಗೆ ಜನ್ಮ ರಾಶಿ ಜನ್ಮ ನಕ್ಷತ್ರದಲ್ಲಿರುವ ಈ ಗ್ರಹಣದಿಂದ ಸೂಚಿತವಾಗುವ ಸಕಲ ವಿಧವಾದ ಅರಿಷ್ಟವೂ ಪರಿಹಾರವಾಗುವ ಮೂಲಕ ಏಕಾದಶರಾಶಿಯಲ್ಲಾದ ಗ್ರಹಣದಿಂದ ಸೂಚಿತವಾಗುವ ಶುಭಫಲ ಪ್ರಾಪ್ತಿಗಾಗಿ ಈ ಬಿಂಬದಾನವನ್ನು ಮಾಡುತ್ತೇನೆ.

* ಎಲೈ ಅಂಧಕಾರ ರೂಪನಾದ, ಮಹಾ ಭಯಂಕರನಾದ, ಚಂದ್ರ-ಸೂರ್ಯರ ಸೊಕ್ಕನ್ನು ಮುರಿಯುವನಾದ, ಸಿಂಹಿಕೆ ಎಂಬ ರಕ್ಕಸಿಯ ಪುತ್ರನಾದ ಮತ್ತು ನಾಶರಹಿತನಾದ ಎಲೈ ರಾಹುವೇ! ನಿನಗೆ ನಮಸ್ಕಾರ ಮಾಡುತ್ತೇನೆ. ನಾನು ಮಾಡುವ ಚಿನ್ನದ ಈ ಸೂರ್ಯ-ಚಂದ್ರರ ಬಿಂಬದ ಮತ್ತು ನಾಗಪ್ರತಿಮೆಯ ದಾನದಿಂದ ನನಗೆ ಶಾಂತಿಯನ್ನುಂಟು ಮಾಡುವವನಾಗು; ಮತ್ತು ಗ್ರಹಣ ವೇಧೆಯಿಂದಾಗಬಹುದಾದ ಭಯುದ್ದೆಶೆಯಿಂದ ನನ್ನನ್ನು ರಕ್ಷಿಸು.

§ ಚಿನ್ನದಿಂದ ನಿರ್ಮಿತವಾದ ನಾಗರೂಪವಾದ ಈ ರಾಹು ಬಿಂಬವನ್ನು ಮತ್ತು ಚಿನ್ನದ ಸೂರ್ಯಬಿಂಬ ಅಥವಾ ಬೆಳ್ಳಿಯ ಚಂದ್ರಬಿಂಬವನ್ನೂ ತುಪ್ಪದಿಂದ ತುಂಬಿದ ಕಂಚಿನ ಪಾತ್ರೆಯಲ್ಲಿಟ್ಟು, ಯಥಾ ಶಕ್ತಿ ಎಳ್ಳು, ವಸ್ತ್ರ ದಕ್ಷಿಣೆ ಇವುಗಳಿಂದ ಸಹಿತವಾಗಿ ಗ್ರಹಣದಿಂದ ಸೂಚಿತವಾಗುವ ಅರಿಷ್ಟವು ನಾಶವಾಗಿಶುಭಫಲವು ಲಭಿಸುವದಕ್ಕಾಗಿ ನಿಮಗೆ ಕೊಡುತ್ತೇನೆ.

ರ್ಣಕಾಂಸ್ಯಪಾತ್ರನಿಹಿತಂ ಯಥಾಶಕ್ತಿ ತಿಲ ವಸ್ತ್ರ ದಕ್ಷಿಣಾ ಸಹಿತಂ ಗ್ರಹಣ ಸೂಚಿತ ಅರಿಷ್ಟವಿನಾಶಾರ್ಥಂ ಶುಭಫಲವಾಪ್ತ್ಯರ್ಥಂಚ ತುಭ್ಯಮಹಂ ಸಂಪ್ರದದೆ'' ಎಂದು ದಾನವಾಕ್ಯವನ್ನು ಹೇಳಿ ಮೊದಲೇ ಪೂಜಿಮಾಡಿದ್ದ ಬ್ರಾಹ್ಮಣನಿಗೆ ದಾನಕೊಡಬೇಕು. ಜನ್ಮರಾಶಿಗೆ ನಾಲ್ಕನೆಯದೇ ಮೊದಲಾದ ಅರಿಷ್ಟ ಸ್ಥಾನಗಳಲ್ಲಾದಗಲೂ ಮೇಲ್ಕಂಡಂತೆಯೇ ದಾನ ಮಾಡಬೇಕೆಂದು ತೋರುತ್ತೆ. ಯಾರಿಗೆ ಜನ್ಮ ರಾಶಿಯಲ್ಲಿ ಗ್ರಹಣವಾಗುವದೋ ಅವರು ಗ್ರಹಣವಾದಾಗ ಸೂರ್ಯ-ಚಂದ್ರ ಬಿಂಬಗಳನ್ನು ನೋಡಬಾರದು. ರಾಶಿಗ್ರಹಣವಿಲ್ಲದವರೂ ಕೂಡ ರಾಹುಗ್ರಸ್ತವಾದ ಸೂರ್ಯ-ಚಂದ್ರ ಬಿಂಬಗಳನ್ನು ಒಟ್ಟೆಯ ಮರೆಯಲಲ್ಲಾಗಲೀ ನೀರಿನಲ್ಲಾಗಲೀ ನೋಡಬಹುದೇ ಹೊರತು ಪ್ರತ್ಯಕ್ಷವಾಗಿ ನೋಡಲೇಬಾರದು.

## ಗ್ರಹಣದಲ್ಲಿ ಮಂಗಳ ಕಾರ್ಯಗಳನ್ನು ಬಿಡಬೇಕಾದಕಾಲ.

ಚಂದ್ರಗ್ರಹಣವು ಪೂರ್ಣಗ್ರಾಸವಾದಾಗದ್ವಾದಶಿ ಮೊದಲುಗೊಂಡು ತದಿಗೇವರಿಗಿನ ಏಳು ದಿನಗಳನ್ನೂ ಸೂರ್ಯಗ್ರಹಣವು ಪೂರ್ಣಗ್ರಾಸವಾದಾಗ ಏಕಾದಶಿ ಮೊದಲು ಚೌತೀವರಗಿನ ಒಂಭತ್ತು ದಿನಗಳನ್ನೂ ಮಂಗಳ ಕಾರ್ಯದಲ್ಲಿ ಬಿಡಬೇಕು. ಖಂಡಗ್ರಹಣದಲ್ಲಿಯಾದರೆ ಚತುರ್ದಶಿ ಮೊದಲಾಗಿ ಮೂರು ದಿವಸಗಳನ್ನು ಬಿಡಬೇಕು ಜ್ಯೋತಿಷಗ್ರಂಥಗಳಲ್ಲಿ ಎಷ್ಟು ಪಾದಗಳು ಗ್ರಾಸವಾಗಿರುತ್ತವೆಯೋ ಅದರ ತಾರತಮ್ಯಾನುಸಾರವಾಗಿ ಬಿಡಬೇಕಾದ ದಿನಗಳನ್ನು ಹೆಚ್ಚು ಅಥವಾ ಕಡಿಮೆ ಮಾಡಿಕೊಳ್ಳಬೇಕೆಂತ ಹೇಳಿದೆ. ಗ್ರಸ್ತಾಸ್ತದಲ್ಲಿ ಹಿಂದಿನ ಮೂರು ದಿನಗಳನ್ನೂ ಗ್ರಸ್ತೋದಯದಲ್ಲಿ ಮುಂದಿನ ಮೂರು ದಿನಗಳನ್ನೂ ಬಿಡಬೇಕು. ಪೂರ್ಣಗ್ರಾಸದಲ್ಲಿ ಗ್ರಹಣವಾದ ನಕ್ಷತ್ರವನ್ನು ಆರು ತಿಂಗಳು ಬಿಡಬೇಕು. ಪಾದಗ್ರಾಸವೇ ಮೊದಲಾದದುರಲ್ಲಿ ಒಂದೂವರೆ ತಿಂಗಳೇ ಮೊದಲಾಗಿ ಗ್ರಾಸಪಾದದ ತಾರತಮ್ಯಾನುಸಾರ ಬಿಡಬೇಕೆಂದು ತಿಳಿಯುವದು. ದಾನ ಮಾಡಿದ ಪದಾರ್ಥವನ್ನು ಗ್ರಹಣಾಂತರ ದಾನ ಮಾಡುವದರಲ್ಲಿ ಸಂಕಲ್ಪಿತ ದ್ರವ್ಯಕ್ಕಿಂತ ಎರಡರಷ್ಟನ್ನು ಕೊಡಬೇಕಾಗುತ್ತೆ.

ಇಲ್ಲಿಗೆ ಗ್ರಹಣನಿರ್ಣಯವೆಂಬ ಮುವ್ವತ್ತೊಂದನೆಯ ಉದ್ದೇಶವು.

---

## ೪೪ ಸಮುದ್ರಸ್ನಾನ ನಿರ್ಣಯ.

ಸಮುದ್ರ ಸ್ನಾನವನ್ನು ಪೂರ್ಣಿಮಾ ಅಮಾವಾಸ್ಯೆಯೇ ಮೊದಲಾದ ಪರ್ವಗಳಲ್ಲಿ ಮಾಡಬೇಕು. ಶುಕ್ರವಾರ, ಮಂಗಳವಾರಗಳಲ್ಲಿ ಸ್ನಾನ ಮಾಡಬಾರದು. ಅಶ್ವತ್ಥವೃಕ್ಷವನ್ನೂ ಸಮುದ್ರವನ್ನೂ ಪೂಜಿಸಲೇ ಬೇಕಾದರೂ ದೂರದಲ್ಲಿದ್ದು ಪೂಜಿಸಬೇಕೇ ಹೊರ್ತು ಮುಟ್ಟಕೂಡದು. ಆದರೆ ಅಶ್ವತ್ಥವನ್ನು ಶನಿವಾರದಲ್ಲಿಯೂ, ಸಮುದ್ರವನ್ನು ಪರ್ವಗಳಲ್ಲಿಯೂ ಸ್ಪರ್ಶ ಮಾಡಬಹುದು. ಸಮುದ್ರ ಸ್ನಾನಕ್ಕೆ ಸೇತುವಿನಲ್ಲಿ ಕಾಲನಿಯಮವಿಲ್ಲ. ಸಮುದ್ರ ಸ್ನಾನದ ಪ್ರಯೋಗವನ್ನು ಬೇರೆ ಗ್ರಂಥಗಳಿಂದ ತಿಳಿಯತಕ್ಕದ್ದು.

ಇಲ್ಲಿಗೆ ಸಮುದ್ರ ಸ್ನಾನನಿರ್ಣಯವೆಂಬ ೩೨ ನೆಯ ಉದ್ದೇಶವು.

---

## ೪೫ ತಿಥಿವಿಶೇಷ ನಕ್ಷತ್ರವಿಶೇಷ, ವಾರಾದಿಗಳಲ್ಲಿ ವಿಧಿ ನಿಷೇಧಗಳು.

ಸಪ್ತಮಿ ಯಲ್ಲಿ ಎಣ್ಣೆಯ ಸ್ಪರ್ಶವನ್ನೂ, ಕರೀ ಬಟ್ಟೆಯನ್ನೂ, ನೆಲ್ಲೀ ಕಾಯಿ ಹಚ್ಚಿಕೊಂಡು ಸ್ನಾನವನ್ನೂ, ತಾಮ್ರ ಪಾತ್ರೆಯಲ್ಲಿ ಭೋಜನವನ್ನೂ ಜಗಳವನ್ನೂ ಬಿಡಬೇಕು. ನಂದಾ§ ತಿಥಿಗಳಲ್ಲಿ ಅಭ್ಯಂಗ ಸ್ನಾನವನ್ನೂ ರಿಕ್ತಾ* ತಿಥಿಗಳಲ್ಲಿ ಕ್ಷೌರವನ್ನೂ ಬಿಡಬೇಕು. ಶೂದ್ರಾದಿಗಳು ಜಯಾ+ ತಿಥಿಯಲ್ಲಿ ಮಾಂಸವನ್ನು ತಿನ್ನಬಾರದು. ಪೂರ್ಣಾ‡ ತಿಥಿಯಲ್ಲಿ ಸ್ತ್ರೀ ಸಂಗವನ್ನು ಮಾಡಬಾರದು. ಭಾನುವಾರದಲ್ಲಿ ಅಭ್ಯಂಗವನ್ನೂ, ಮಂಗಳವಾರದಲ್ಲಿ ಕ್ಷೌರವನ್ನೂ ಬುಧವಾರದಲ್ಲಿ ಸ್ತ್ರೀಸಂಗವನ್ನು ಬಿಡಬೇಕು. ಚಿತ್ತೆ, ಹಸ್ತ, ಶ್ರವಣ, ಈ ನಕ್ಷತ್ರಗಳಲ್ಲಿ ಎಣ್ಣೆಯನ್ನೂ ಬಿಡಬೇಕು. ವಿಶಾಖಾ ನಕ್ಷತ್ರದಲ್ಲಿಯೂ ಪಾಡ್ಯದಲ್ಲಿಯೂ ಕ್ಷೌರವನ್ನು ಬಿಡಬೇಕು. ಮಘೆ, ಕೃತ್ತಿಕೆ, ಉತ್ತರೆ, ಉತ್ತರಾಷಾಢೆ, ಉತ್ತರಾಭಾದ್ರಪದೆ, ಇವುಗಳಲ್ಲಿ ಸ್ತ್ರೀ ಸಂಗವನ್ನು ಮಾಡಕೂಡದು.

---

§ ಪಾಡ್ಯ, ಷಷ್ಠಿ, ಏಕಾದಶಿಗಳು ನಂದಾತಿಥಿಗಳು.

* ಚೌತಿ, ನವಮಿ, ಚತುರ್ದಶಿಗಳು ರಿಕ್ತಾತಿಥಿಗಳು.

\+ ಬಿದಿಗೆ, ಅಷ್ಟಮಿ, ತ್ರಯೋದಶಿಗಳು ಜಯಾ ತಿಥಿಗಳು.

‡ ಪಂಚಮಿ, ದಶಮಿ, ಪೂರ್ಣಿಮಾ, ಅಮಾವಾಸ್ಯೆಗಳು ಪೂರ್ಣಾತಿಥಿಗಳು.

ಸಪ್ತಮಿಯಲ್ಲಿ ಎಳ್ಳನ್ನು ತಿನ್ನಬಾರದು. ಎಳ್ಳಿನಿಂದ ತರ್ಪಣವನ್ನೂ ಮಾಡಬಾರದು. ಅಷ್ಟಮಿಯಲ್ಲಿ ತೆಂಗಿನಕಾಯನ್ನೂ ನವಮಿಯಲ್ಲಿ ಸೋರೇಕಾಯನ್ನೂ ದಶಮಿಯಲ್ಲಿ ಪಡವಲಕಾಯನ್ನೂ ಏಕಾದಶಿಯಲ್ಲಿ ಅವರೆಯನ್ನೂ ದ್ವಾದಶಿಯಲ್ಲಿ ಕಿರುಗಡಲೆಯನ್ನೂ ತ್ರಯೋದಶಿಯಲ್ಲಿ ಬದನೇಕಾಯನ್ನೂ, ತಿನ್ನಬಾರದು. ಹುಣ್ಣಿಮೆ, ಅಮಾವಾಸ್ಯೆ, ಸಂಕ್ರಮಣ, ಚತುರ್ದಶಿ, ಅಷ್ಟಮಿ, ಈ ದಿವಸಗಳಲ್ಲಿ ತೈಲ, ಸ್ತ್ರೀ, ಮತ್ತು ಮಾಂಸ ಇವುಗಳ ಸೇವನೆಯಿಂದ ಚಾಂಡಾಲಜನ್ಮ ಉಂಟಾಗುವದು. ಹುಣ್ಣಿಮೆ, ಅಮಾವಾಸ್ಯೆ, ಸಂಕ್ರಮಣ, ದ್ವಾದಶಿಗಳಲ್ಲಿಯೂ ಶ್ರಾದ್ಧ ದಿನಗಳಲ್ಲಿಯೂ ಬಟ್ಟೆಯನ್ನು ಹಿಂಡಬಾರದು. ರಾತ್ರಿಕಾಲದಲ್ಲಿ ಮಣ್ಣನ್ನೂ ಗೋಮಯವನ್ನೂ, ನೀರನ್ನೂ ಸಹ ತರಬಾರದು. ಪ್ರದೋಷಕಾಲದಲ್ಲಿ ಗೋಮೂತ್ರವನ್ನು ಹಿಡಿಯಬಾರದು. ಶಾಂತ್ಯರ್ಥವಾಗಿ ಅಮಾವಾಸ್ಯೆಯೇ ಮೊದಲಾದ ಪರ್ವಕಾಲದಲ್ಲಿ ತಿಲಹೋಮವನ್ನು ಅವಶ್ಯವಾಗಿ ಮಾಡಬೇಕು. ಆತ್ಮರಕ್ಷಣೆಗಾಗಿ ದಾನಾದಿಗಳನ್ನು ಮಾಡಬೇಕು. ಪರ್ವಕಾಲಗಳಲ್ಲಿ ಅಧ್ಯಯನವನ್ನು ಮಾಡಬಾರದು.

ಆಚಮನ, ಬ್ರಹ್ಮಚರ್ಯಪರನಾಗಿರಬೇಕು. ಪಾಡ್ಯ, ಅಮಾವಾಸ್ಯೆ, ಮಿ ತಿಥಿಗಳಲ್ಲಿಯೂ ಶ್ರಾದ್ಧ ದಿನದಲ್ಲಿಯೂ ಹುಟ್ಟಿದ ದಿವಸದ . ವ್ರತದಿನದಲ್ಲಿಯೂ ಉಪವಾಸದಿನದಲ್ಲಿಯೂ ಭಾನುವಾರದಲ್ಲಿಯೂ ಮಧ್ಯಾಹ್ನ-ಸಾಯಂಕಾಲಗಳಲ್ಲಿಯೂ ದಂತಕಾಷ್ಠದಿಂದ ಹಲ್ಲುಗಳನ್ನುಜ್ಜಬಾರದು. ದಂತಕಾಷ್ಠಗಳು ಸಿಕ್ಕದ ದಿನಗಳಲ್ಲಿಯೂ ನಿಷಿದ್ಧ ದಿನಗಳಲ್ಲಿಯೂ ನೀರಿನಿಂದ ಹನ್ನೆರಡು ಸಾರಿ ಬಾಯಿ ಮುಕ್ಕಳಿಸುವದರಿಂದಾಗಲೀ ಯಲೆಗಳಿಂದ ಉಜ್ಜುಕೊಳ್ಳುವದರಿಂದಾಗಲೀ ಮುಖವನ್ನು ಶುದ್ಧಿಮಾಡಿಕೊಳ್ಳಬೇಕು.

ಇಲ್ಲಿ ನಿಷೇಧ ವಿಧಿಯನ್ನು ಹೇಳಿರುವ ಎಲ್ಲ ಕಡೆಯಲ್ಲಿಯೂ ತಿಥಿಯೇ ಮೊದಲಾದವುಗಳು ಆಯಾಯ ಕಾಲದಲ್ಲಿ ವ್ಯಾಪ್ತಿಯುಳ್ಳವುಗಳು ಗ್ರಾಹ್ಯಗಳಾಗಿರುತ್ತವೆ.

ಎಂಬಲ್ಲಿಗೆ ಧರ್ಮಸಿಂಧುಸಾರದಲ್ಲಿ ಮೂವತ್ತುಮೂರನೆಯ
ಉದ್ದೇಶವು ಮುಗಿದುದು.

ಇಲ್ಲಿಗೆ ಮೊದಲನೆಯ ಪರಿಚ್ಛೇದವು

[ ಸಂಪೂರ್ಣ. ]